# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>**Volume 150** | ಬೆಂಗಳೂರು, ಗುರುವಾರ, ಅಕ್ಟೋಬರ್ ೨೯, ೨೦೧೫ (ಕಾರ್ತಿಕ ೭, ಶಕ ವರ್ಷ ೧೯೩೭)<br>**Bengaluru, Thursday, October 29, 2015 ( Karthika 7, Shaka Varsha 1937)** | ಸಂಚಿಕೆ ೪೩<br>**Issue 43** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2015–16ನೇ ಸಾಲಿನ ವರ್ಗಾವಣೆಗಳನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ನಿಯಮಗಳ ರೀತ್ಯ ಸಮಾಲೋಚನೆ ಮುಖಾಂತರ ವರ್ಗಾವಣೆ ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಆಕುಇ 248 ಹೆಚ್‌ಎಸ್‌ಹೆಚ್ 2015, ದಿನಾಂಕ : 23–06–2015 ಹಾಗೂ ತಿದ್ದುಪಡಿ ದಿನಾಂಕ: 12–08–2015.
2. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಪತ್ರ ಸಂಖ್ಯೆ: ಜೆಆರ್‌ಓ/ಹೆಚ್‌ಎಸ್‌ಪಿ (04)103/2014–15, ದಿನಾಂಕ: 28–05–2015.
3. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಪತ್ರ ಸಂಖ್ಯೆ: ಆಡಳಿತ/46/2015–16, ದಿನಾಂಕ: 17–08–2015.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2015–16ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತಾಲಯದ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯಾಧಿಕಾರಿಗಳು ಹಾಗೂ ಇತರೆ ಸಿಬ್ಬಂದಿಗಳ ವರ್ಗಾವಣೆಯನ್ನು ಏಪ್ರಿಲ್ ಮತ್ತು ಮೇ ತಿಂಗಳಿನಲ್ಲಿ ನಡೆಸಬೇಕಾಗಿತ್ತು. ಆದರೆ ಸದರಿ ಅವಧಿಯಲ್ಲಿ ಚುನಾವಣಾ ನೀತಿ ಸಂಹಿತೆ ಜಾರಿಯಲ್ಲಿರುವುದರಿಂದ ವರ್ಗಾವಣೆ ಅವಧಿಯನ್ನು ಆಗಸ್ಟ್ 2015ರ ಅಂತ್ಯದವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರು ರಾಜ್ಯಾದಾದ್ಯಂತ ತಾಯಿ ಮಕ್ಕಳ ಆರೋಗ್ಯದ ಹಿತದೃಷ್ಟಿಯಿಂದ ಹಾಗೂ ತಾಯಿ ಮತ್ತು ಶಿಶು ಮರಣದ ಪ್ರಮಾಣವನ್ನು ಶೂನ್ಯ ಗುರಿಗೆ ತರುವ ನಿಟ್ಟಿನಲ್ಲಿ ರಾಜ್ಯಾದಾದ್ಯಂತ ಮಂಜೂರಾಗಿರುವ ಎಲ್ಲಾ ಸಮುದಾಯ ಆರೋಗ್ಯ ಕೇಂದ್ರ, ಸಾರ್ವಜನಿಕ ಆಸ್ಪತ್ರೆ, ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿ ಹಾಲಿ ಮಂಜೂರಾಗಿರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಹಿರಿಯ ವೈದ್ಯಾಧಿಕಾರಿ ಹಾಗೂ ತಜ್ಞರ ಹುದ್ದೆಗಳನ್ನು ಆದ್ಯತೆಯ ಮೇರೆಗೆ ಅನುಕ್ರಮವಾಗಿ ಪುನರ್ ವಿಂಗಡಿಸಲು ಪ್ರಸ್ತಾಪಿಸಿರುತ್ತಾರೆ.

ಮೇಲೆ ಓದಲಾದ (3)ರ ಪತ್ರದಲ್ಲಿ ದಿನಾಂಕ: 14–08–15ರಂದು ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರೊಂದಿಗೆ ಚರ್ಚಿಸಿದಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ಆಯುಷ್ ಸೇವೆಗಳು ಅವರು ಪತ್ರವನ್ನು ಬರೆದು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ 2011 ಹಾಗೂ ಅದರಡಿಯಲ್ಲಿ ರಚಿತವಾದ ನಿಯಮಗಳ ಪ್ರಕಾರ ನಿರ್ಣಾಯಕ ಹಾಗೂ ನಿರ್ಣಾಯಕವಲ್ಲದ ಹುದ್ದೆಗಳನ್ನು ತಾಲ್ಲೂಕು ಮತ್ತು ಜಿಲ್ಲಾ ಆಸ್ಪತ್ರೆಗಳಲ್ಲಿ ಪ್ರಕಟಿಸಿ ಭರ್ತಿ ಮಾಡಲು ಮಿಸ್–ಮ್ಯಾಚ್ ಅಡಿಯಲ್ಲಿ ತಜ್ಞತೆ ಅಲ್ಲದಿರುವ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರನ್ನು ಅವರ ತಜ್ಞತೆ ಅನುಸಾರ ವರ್ಗಾವಣೆ ಮಾಡಲು 10 ವರ್ಷಕ್ಕಿಂತ ಮೇಲ್ಪಟ್ಟು ಒಂದೇ ಸ್ಥಳದಲ್ಲಿ ಸೇವೆ ಸಲ್ಲಿಸುತ್ತಿರುವ ತಜ್ಞ ವೈದ್ಯರು/ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿಗಳು ಪರಸ್ಪರ ವರ್ಗಾವಣೆಗೆ ಅರ್ಜಿ ಸಲ್ಲಿಸಿದ್ದು, ಅವರನ್ನು ವರ್ಗಾವಣೆ ಪಟ್ಟಿಯಲ್ಲಿ ಸೇರಿಸುವ ಬಗ್ಗೆ ಹಾಗೂ ಉಚ್ಚ ನ್ಯಾಯಾಲಯದ ಆದೇಶದಂತೆ ವಯೋನಿವೃತ್ತಿ ಹೊಂದಲು 2 ವರ್ಷ ಬಾಕಿ ಇರುವವರನ್ನು ವರ್ಗಾವಣೆ ಪಟ್ಟಿಯಿಂದ ಕೈಬಿಡಲು ಮತ್ತು ಖಾಯಂಪೂರ್ವ ಸೇವಾವಧಿ ಘೋಷಣೆಯಾಗದೇ ಕಾರ್ಯಕ್ರಮಾಧಿಕಾರಿಗಳ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರ ಸೇವೆಯನ್ನು ಹಿಂಪಡೆದು ವೈದ್ಯರ ಹುದ್ದೆಯಲ್ಲಿ ನೇಮಿಸಬೇಕೆ ಅಥವಾ ಕಾರ್ಯಕ್ರಮಾಧಿಕಾರಿ ಹುದ್ದೆಯಲ್ಲಿ ನೇಮಿಸಬೇಕೆ ಎಂಬ ಬಗ್ಗೆ ಮಾರ್ಗದರ್ಶನ ಕೋರಿರುವುದನ್ನು ಪರಿಶೀಲಿಸಲಾಗಿದೆ. ಮೊದಲ ಹಂತದಲ್ಲಿ ಹಾಲಿ ಲಭ್ಯವಿರುವ ತಜ್ಞ ವೈದ್ಯರ ಹಾಗೂ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಪೂರ್ಣ ಪ್ರಮಾಣದಲ್ಲಿ ಜಿಲ್ಲಾ ಆಸ್ಪತ್ರೆ,

ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿ ತುಂಬುವುದರ ಮುಖಾಂತರ ಹಾಗೂ ಅಕ್ಕ-ಪಕ್ಕದ 2-3 ತಾಲ್ಲೂಕು ಆಸ್ಪತ್ರೆಗಳಿಗಿಂತ ಹೆಚ್ಚು ದೂರವಿರುವ ಸಮುದಾಯ ಆರೋಗ್ಯ ಕೇಂದ್ರಗಳನ್ನು ಗುರುತಿಸಿ ಹೆಚ್ಚು ದೂರವಿರುವ ಹಾಗೂ ಹಾಲಿ ನಡೆಸಲ್ಪಡುತ್ತಿರುವ ಒಂದು ಸಮುದಾಯ ಆರೋಗ್ಯ ಕೇಂದ್ರವನ್ನು ಗುರುತಿಸಿ ಮೂವರು ತಜ್ಞರ ತಂಡ ಅಂದರೆ ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞ, ಮಕ್ಕಳ ತಜ್ಞ ಮತ್ತು ಅರವಳಿಕೆ ತಜ್ಞರು ಇರುವ ಒಂದು ತಂಡವನ್ನು ಕಡ್ಡಾಯವಾಗಿ ಸಮಾಲೋಚನೆ ಮುಖಾಂತರ ತುಂಬತಕ್ಕದ್ದು, ಹಾಗೂ ಉಳಿದ ಹುದ್ದೆಗಳನ್ನು ಮಂಜೂರಾದ ಹುದ್ದೆಗಳಿಗನುಗುಣವಾಗಿ ಆದ್ಯತೆಯನುಸಾರ ಅಂದರೆ ಜನರಲ್ ಮೆಡಿಸನ್, ಜನರಲ್ ಸರ್ಜರಿ, ಕೀಲು ಮತ್ತು ಮೂಳೆರೋಗ ತಜ್ಞರು ಹಾಗೂ ಒಂದು ಹಿರಿಯ ವೈದ್ಯಾಧಿಕಾರಿ ಹಾಗೂ ಒಂದು ಹಿರಿಯ/ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 346 ಹೆಚ್‌ಎಸ್‌ಹೆಚ್ 2015, ಬೆಂಗಳೂರು, ದಿನಾಂಕ : 19-08-2015.**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯಾದ್ಯಂತ ತಾಯಿ ಮತ್ತು ಮಕ್ಕಳ ಆರೋಗ್ಯದ ಹಿತದೃಷ್ಟಿಯಿಂದ ಹಾಗೂ ತಾಯಿ ಮತ್ತು ಶಿಶು ಮರಣದ ಪ್ರಮಾಣವನ್ನು ಕಡಿಮೆ ಮಾಡುವ ನಿಟ್ಟಿನಲ್ಲಿ ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಗ್ರಾಮೀಣ ಪ್ರದೇಶದ ಜನರಿಗೆ ಆಯಾ ಆಸ್ಪತ್ರೆಗಳಲ್ಲೇ ತಜ್ಞ ವೈದ್ಯರ ಸಂಪೂರ್ಣ ಆರೋಗ್ಯ ಸೇವೆ ಕಲ್ಪಿಸುವ ಹಿತದೃಷ್ಟಿಯನ್ನು ಗಮನದಲ್ಲಿರಿಸಿ ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿ ಮಂಜೂರಾದ ಎಲ್ಲಾ ತಜ್ಞ ವೈದ್ಯರ ಹುದ್ದೆಗಳನ್ನು ಪ್ರಕಟಿಸಿ ಭರ್ತಿ ಮಾಡಲು ತದನಂತರ ಉಳಿಕೆಯಾಗುವ ಹುದ್ದೆಗಳನ್ನು ಅಕ್ಕ-ಪಕ್ಕದ ತಾಲ್ಲೂಕು ಆಸ್ಪತ್ರೆಗಳಿಗಿಂತ ಹೆಚ್ಚು ದೂರದಲ್ಲಿ ಮಂಜೂರಾದ ಸಮುದಾಯ ಆರೋಗ್ಯ ಕೇಂದ್ರಗಳನ್ನು ಗುರುತಿಸಿ ಅಲ್ಲಿ ತಜ್ಞರ ಹಾಗೂ ಇತರೆ ವೈದ್ಯರ ಮತ್ತು ಅರೆ ವೈದ್ಯಕೀಯ ಹುದ್ದೆಗಳನ್ನು ಭರ್ತಿ ಮಾಡುವುದು ಸೂಕ್ತವೆಂದು ನಿರ್ಧರಿಸಿ ಈ ಕೆಳಕಂಡಂತೆ ಭರ್ತಿ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

2. **ಜಿಲ್ಲಾ ಆಸ್ಪತ್ರೆ:**

(ಅ) ಜಿಲ್ಲಾಸ್ಪತ್ರೆಗಳಲ್ಲಿ ತಾಯಿ ಮತ್ತು ಮಗುವಿನ ಆರೋಗ್ಯದ ಬಗ್ಗೆ ಸೂಕ್ತವಾದ ರಕ್ಷಣೆ ನೀಡುವುದಕ್ಕಾಗಿ ತುಂಬಾ ಅಗತ್ಯವಿರುವ ಮೂವರು ತಜ್ಞರು ಇರುವ ತಂಡ ಎಂದರೆ ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞ, ಮಕ್ಕಳ ತಜ್ಞ ಮತ್ತು ಅರವಳಿಕೆ ತಜ್ಞರ ಒಂದು ತಂಡವನ್ನು ಕಡ್ಡಾಯವಾಗಿ ತುಂಬಲೇಬೇಕು. ಹಾಗೂ ಈ ಜಿಲ್ಲಾ ಆಸ್ಪತ್ರೆಗಳಲ್ಲಿ ಹೆಚ್ಚು ಹೆರಿಗೆಗಳಾಗುತ್ತಿರುವುದನ್ನು ಗಣನೆಗೆ ತೆಗೆದುಕೊಂಡು ಅದಕ್ಕನುಗುಣವಾಗಿ ಮಂಜೂರಾದಂತಹ ಹುದ್ದೆಗಳನ್ನು ಭರ್ತಿ ಮಾಡತಕ್ಕದ್ದು;

(ಆ) ಜಿಲ್ಲಾ ಆಸ್ಪತ್ರೆಗೆ ಮಂಜೂರಾದ ಎಲ್ಲಾ ಇತರೆ ತಜ್ಞತೆಗಳ ಹಾಗೂ ವೈದ್ಯರು ಮತ್ತು ಅರೆವೈದ್ಯಕೀಯ ಹುದ್ದೆಗಳನ್ನು ಕಡ್ಡಾಯವಾಗಿ ಪ್ರಕಟಿಸಿ ಅವುಗಳನ್ನು ಕಡ್ಡಾಯವಾಗಿ ತುಂಬುವ ವ್ಯವಸ್ಥೆ ಮಾಡತಕ್ಕದ್ದು, ಆದರೆ ಇಂತಹ ಆಸ್ಪತ್ರೆಗಳಲ್ಲಿ ಯಂತ್ರೋಪಕರಣದ ಲಭ್ಯತೆಯಿರುವುದನ್ನು ಖಚಿತಪಡಿಸಿಕೊಂಡ ಬಳಿಕವಷ್ಟೆ ತುಂಬತಕ್ಕದ್ದು;

3. **ತಾಲ್ಲೂಕು ಆಸ್ಪತ್ರೆ:**

(ಅ)ತಾಲ್ಲೂಕು ಆಸ್ಪತ್ರೆಗಳಲ್ಲಿ ತಾಯಿ ಮತ್ತು ಮಗುವಿನ ಆರೋಗ್ಯದ ಬಗ್ಗೆ ಸೂಕ್ತವಾದ ರಕ್ಷಣೆ ನೀಡುವುದಕ್ಕಾಗಿ ತುಂಬಾ ಅಗತ್ಯವಿರುವ ಮೂವರು ತಜ್ಞರು ಇರುವ ತಂಡ ಎಂದರೆ ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞ, ಮಕ್ಕಳ ತಜ್ಞ ಮತ್ತು ಅರವಳಿಕೆ ತಜ್ಞರ ಒಂದು ತಂಡವನ್ನು ಕಡ್ಡಾಯವಾಗಿ ತುಂಬಲೇಬೇಕು. ತಾಯಿ ಮತ್ತು ಮಗುವಿನ ಆರೈಕೆಗಾಗಿ ಹೆಚ್ಚುವರಿ ಮೂವರು ತಜ್ಞರಿರುವ ತಂಡ ಮಂಜೂರಾಗಿದ್ದಲ್ಲಿ ಸದರಿ ಆಸ್ಪತ್ರೆಯಲ್ಲಿ ಆಗುತ್ತಿರುವ ಹೆರಿಗೆಗಳನ್ನು ಗಣನೆಗೆ ತೆಗೆದುಕೊಂಡು ಅದಕ್ಕನುಗುಣವಾಗಿ ಆ ಹುದ್ದೆಗಳನ್ನು ಭರ್ತಿ ಮಾಡತಕ್ಕದ್ದು.

(ಆ) ತಾಲ್ಲೂಕು ಆಸ್ಪತ್ರೆಗೆ ಮಂಜೂರಾದ ಎಲ್ಲಾ ಇತರೆ ತಜ್ಞತೆಗಳ ಹಾಗೂ ವೈದ್ಯರು ಮತ್ತು ಅರೆವೈದ್ಯಕೀಯ ಹುದ್ದೆಗಳನ್ನು ಕಡ್ಡಾಯವಾಗಿ ಪ್ರಕಟಿಸಿ ಅವುಗಳನ್ನು ಕಡ್ಡಾಯವಾಗಿ ತುಂಬುವ ವ್ಯವಸ್ಥೆ ಮಾಡತಕ್ಕದ್ದು ಹಾಗೂ ಇಂತಹ ಆಸ್ಪತ್ರೆಗಳಲ್ಲಿ ಯಂತ್ರೋಪಕರಣದ ಲಭ್ಯತೆಯನ್ನು ಖಚಿತಪಡಿಸಿಕೊಳ್ಳತಕ್ಕದ್ದು; ತಾಲ್ಲೂಕು ಆಸ್ಪತ್ರೆಯಲ್ಲಿ 3 ತಜ್ಞತೆಯ ಹುದ್ದೆಗಳ ಗುಂಪನ್ನು ಹೊರತುಪಡಿಸಿ, ಇತರೆ ತಜ್ಞತೆಯಲ್ಲಿ ಎರಡು ಹುದ್ದೆಗಳು ಮಂಜೂರಾಗಿದ್ದಲ್ಲಿ ಇತರೆ ತಜ್ಞತೆಯ ಒಂದು ಖಾಲಿ ಹುದ್ದೆಯನ್ನು ಮಾತ್ರ ಭರ್ತಿ ಮಾಡತಕ್ಕದ್ದು.

4. **ಸಮುದಾಯ ಆರೋಗ್ಯ ಕೇಂದ್ರ/ಸಾರ್ವಜನಿಕ ಆಸ್ಪತ್ರೆ (30 ಅಥವಾ 50 ಹಾಸಿಗೆಗಳ ಆಸ್ಪತ್ರೆ):**

(ಅ)ಸಮುದಾಯ ಆರೋಗ್ಯ ಕೇಂದ್ರ/ಸಾರ್ವಜನಿಕ ಆಸ್ಪತ್ರೆಗಳಲ್ಲಿ (30 ಅಥವಾ 50 ಹಾಸಿಗೆಗಳ ಆಸ್ಪತ್ರೆ) ಒಂದು ಅಥವಾ ಎರಡು ತಜ್ಞರ ಹುದ್ದೆಗಳು ಮಾತ್ರ ಭರ್ತಿಯಾಗಿದ್ದು, ಈ ತಜ್ಞ ಹುದ್ದೆಗಳಿಂದ ತಾಯಿ ಮತ್ತು ಮಗುವಿನ ಆರೋಗ್ಯದ ಬಗ್ಗೆ ಸೂಕ್ತವಾದ ರಕ್ಷಣೆ ಸಿಗದಿರುವುದನ್ನು ಗಮನಿಸಿ ಕರ್ನಾಟಕ ಲೋಕಸೇವಾ ಆಯೋಗದಿಂದ ಎಲ್ಲಾ ಹುದ್ದೆಗಳು ಭರ್ತಿಯಾಗುವ ತನಕ ಮಾತ್ರ ಪ್ರತಿ ಜಿಲ್ಲೆಯಲ್ಲಿ ಅಕ್ಕ-ಪಕ್ಕದ ತಾಲ್ಲೂಕು ಆಸ್ಪತ್ರೆಗಳ ನಡುವಿನ ಅಂತರವನ್ನು ಪರಿಗಣನೆಗೆ ತೆಗೆದುಕೊಂಡು ತಾಲ್ಲೂಕು ಆಸ್ಪತ್ರೆಗಳಿಗಿಂತ ಹೆಚ್ಚು ದೂರವಿರುವ ಕಡೆ ಒಂದು ಸಮುದಾಯ ಆರೋಗ್ಯ ಕೇಂದ್ರದಲ್ಲಿ ಮೂವರು ತಜ್ಞರು ಇರುವ ತಂಡ ಎಂದರೆ ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞ, ಮಕ್ಕಳ ತಜ್ಞ ಮತ್ತು ಅರವಳಿಕೆ ತಜ್ಞರ ಒಂದು ತಂಡವನ್ನು ಕಡ್ಡಾಯವಾಗಿ ಸಮಾಲೋಚನೆ ಮುಖಾಂತರ ತುಂಬಲು ಪರಿಗಣಿಸತಕ್ಕದ್ದು. ಮುಂದುವರೆದು ಕೆಲವು ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ತಜ್ಞತೆಯ ಅನುಸಾರ ಹುದ್ದೆಗಳನ್ನು ಗುರುತಿಸದೇ ಇಂತಿಷ್ಟು ತಜ್ಞ ವೈದ್ಯರೆಂದು ನಿಗದಿಪಡಿಸಿರುವುದರಿಂದ ಈ ತಜ್ಞ ಹುದ್ದೆಗಳ ಪೈಕಿ ತಾಯಿ ಮತ್ತು ಮಕ್ಕಳ ಆರೋಗ್ಯ ಕಾಪಾಡುವ ಹಿತದೃಷ್ಟಿಯಿಂದ ಮೊದಲಿಗೆ ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞರು, ಮಕ್ಕಳ ತಜ್ಞರು ಮತ್ತು ಅರವಳಿಕೆ ತಜ್ಞರ 3 ಹುದ್ದೆಗಳನ್ನು ಮೊದಲಿಗೆ ಭರ್ತಿ ಮಾಡಿ, ತದನಂತರ ಮೊದಲಿಗೆ ಜನರಲ್ ಮೆಡಿಸನ್ ಜನರಲ್ ಸರ್ಜರಿ ಹಾಗೂ ಪ್ರದೇಶದ ಅಗತ್ಯತೆಗನುಗುಣವಾಗಿ ಮಂಜೂರಾದ ಇತರೆ ತಜ್ಞ ಹಾಗೂ ವೈದ್ಯರ ಹುದ್ದೆಗಳನ್ನು ಭರ್ತಿ ಮಾಡತಕ್ಕದ್ದು.

5. **ಮಿಸ್ -ಮ್ಯಾಚ್**

(ಅ)ಈ ಹಿಂದೆ ಸ್ನಾತಕೋತ್ತರ ಪದವಿ/ಡಿಪ್ಲೊಮಾ ಪಡೆದವರನ್ನು ನೇಮಿಸುವಾಗ ನಿರ್ಧಾರಕ ಖಾಲಿ ಸ್ಥಾನ (Critical Vacancy) ಗಳನ್ನು ಭರ್ತಿ ಮಾಡಲು ರೂಪಿಸಲಾದ ನಿಯಮಗಳನ್ವಯ ಹಾಗೂ ಕೇಂದ್ರ ಸರ್ಕಾರವು "ಸ್ಟಾರ್ ರೇಟಿಂಗ್" ಅಲ್ಲದ ಆಸ್ಪತ್ರೆಗಳಲ್ಲಿ ಕಡಿಮೆ ಇರುವ ತಜ್ಞ ವೈದ್ಯರನ್ನು ತುಂಬಲು ನೀಡಿರುವ ನಿರ್ದೇಶನದಂತೆ ಅಂತಹ ಆಸ್ಪತ್ರೆಗಳಲ್ಲಿ ಮಂಜೂರಾಗದ ತಜ್ಞತೆಯ ವೈದ್ಯರು ಸೇವೆ

ಸಲ್ಲಿಸುತ್ತಿದ್ದಲ್ಲಿ ಅವುಗಳನ್ನು ಮಿಸ್‌–ಮ್ಯಾಚ್ ಅಡಿಯಲ್ಲಿ ಗುರುತಿಸತಕ್ಕದ್ದು, ಹಾಗೂ ಅಂತಹ ಹುದ್ದೆಗಳನ್ನು ಮಂಜೂರಾದ ಆಸ್ಪತ್ರೆಗಳ ಹುದ್ದೆಗಳ ಎದುರಿಗೆ ಮಾತ್ರ ಭರ್ತಿ ಮಾಡತಕ್ಕದ್ದು. ಈ ಹಿಂದಿನ ಸಾಲುಗಳಲ್ಲಿ ಮಿಸ್‌–ಮ್ಯಾಚ್ ಅದಂತಹವರನ್ನು ಮೊದಲಿಗೆ ಸಮಾಲೋಚನೆ ಮುಖಾಂತರ ಭರ್ತಿ ಮಾಡುತ್ತಿದ್ದಂತೆ ಭರ್ತಿ ಮಾಡತಕ್ಕದ್ದು ತದನಂತರ ಸಮಾಲೋಚನೆ ಮುಖಾಂತರ ಸಾಮಾನ್ಯ ವರ್ಗಾವಣೆ ಮಾಡತಕ್ಕದ್ದು.

(ಆ) ದಂತ ಕುರ್ಚಿ (Dental Chair) ಇಲ್ಲದಂತಹ ಸ್ಥಳಗಳಲ್ಲಿ ದಂತ ಆರೋಗ್ಯಾಧಿಕಾರಿಗಳನ್ನು ನೇಮಿಸತಕ್ಕದ್ದಲ್ಲಿ. ಒಂದು ವೇಳೆ ದಂತ ಕುರ್ಚಿ ಇಲ್ಲದಂತಹ ಸ್ಥಳದಲ್ಲಿ ದಂತ ಆರೋಗ್ಯಾಧಿಕಾರಿ ಸೇವೆ ಸಲ್ಲಿಸುತ್ತಿದ್ದಲ್ಲಿ ದಂತ ಕುರ್ಚಿಯನ್ನಾಗಲಿ ಅಥವಾ ದಂತ ಆರೋಗ್ಯಾಧಿಕಾರಿಯನ್ನಾಗಲಿ ಸ್ಥಳಾಂತರಿಸತಕ್ಕದ್ದು. ಒಂದು ತಾಲ್ಲುಕು ಅಥವಾ ಜಿಲ್ಲಾ ಆಸ್ಪತ್ರೆಯಲ್ಲಿ ಒಂದೇ ದಂತ ಕುರ್ಚಿಯಿದ್ದು, ಇಬ್ಬರು ದಂತ ಆರೋಗ್ಯಾಧಿಕಾರಿಗಳು ಸೇವೆ ಸಲ್ಲಿಸುತ್ತಿದ್ದಲ್ಲಿ ಒಂದು ದಂತ ಆರೋಗ್ಯಾಧಿಕಾರಿ ಹುದ್ದೆಯನ್ನು ಸ್ಥಳಾಂತರಿಸತಕ್ಕದ್ದು. ಜಿಲ್ಲಾ ಆಸ್ಪತ್ರೆ/ ತಾಲ್ಲೂಕು ಆಸ್ಪತ್ರೆಯಲ್ಲಿ ಎರಡು ದಂತ ಕುರ್ಚಿಗಳು ಲಭ್ಯವಿದ್ದು, ಎರಡು ದಂತ ಆರೋಗ್ಯಾಧಿಕಾರಿಗಳ ಹುದ್ದೆ ಮಂಜೂರಾಗಿದ್ದಲ್ಲಿ ಅಂತಹ ಕಡೆ ಒಬ್ಬ ಸ್ನಾತಕೋತ್ತರ ಪದವೀದರರನ್ನು ಕಡ್ಡಾಯವಾಗಿ ನೇಮಿಸತಕ್ಕದ್ದು.

(ಇ) ತಜ್ಞರ ಹುದ್ದೆಗೆ ಅವಶ್ಯವಾದ ಉಪಕರಣ/ಶಸ್ತ್ರ ಚಿಕಿತ್ಸಾ ಕೊಠಡಿ ಇಲ್ಲದಿರುವಂತಹ ಕಡೆ ತಜ್ಞ ವೈದ್ಯರು ಸೇವೆ ಸಲ್ಲಿಸುತ್ತಿದ್ದಲ್ಲಿ ಅಂತಹ ಹುದ್ದೆಗಳನ್ನು ಮಂಜೂರಾದ ಹಾಗೂ ಅವಶ್ಯವಾದ ಉಪಕರಣ/ಶಸ್ತ್ರ ಚಿಕಿತ್ಸಾ ಕೊಠಡಿ ಇರುವಂತಹ ಕಡೆಗೆ ಮಿಸ್‌–ಮ್ಯಾಚ್ ಅಡಿಯಲ್ಲಿ ಸ್ಥಳಾಂತರಿಸತಕ್ಕದ್ದು.

(ಈ) ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಮೂವರು ಇರುವ ತಂಡದ ಪೈಕಿ ಒಂದು ಅಥವಾ ಎರಡು ತಜ್ಞರ ತಂಡವಿದ್ದಲ್ಲಿ ಅಂತಹ ತಜ್ಞರ ತಂಡವನ್ನು ಇತರೆಡೆ ಮಂಜೂರಾದ ಹಾಗೂ ಮೂವರ ತಜ್ಞರ ತಂಡ ಇಲ್ಲದಿದ್ದ ಪಕ್ಷದಲ್ಲಿ ತಾತ್ಕಾಲಿಕವಾಗಿ ಸ್ಥಳಾಂತರಿಸತಕ್ಕದ್ದು. ಹಾಗೂ ಯಾವುದೇ ಸಮುದಾಯ ಆರೋಗ್ಯ ಕೇಂದ್ರ/ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಮಂಜೂರಾಗದ ಹುದ್ದೆಗಳನ್ನು ನಿರ್ಧಾರಕ ಖಾಲಿ ಸ್ಥಾನಗಳಡಿಯಲ್ಲಿ ಸೇವೆ ಸಲ್ಲಿಸುತ್ತಿದ್ದವರನ್ನು ಮಿಸ್‌–ಮ್ಯಾಚ್ ಅಡಿಯಲ್ಲಿ ಪರಿಗಣಿಸತಕ್ಕದ್ದು.

(ಉ) ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ತಜ್ಞ ವೈದ್ಯರು ಸೇವೆ ಸಲ್ಲಿಸುತ್ತಿದ್ದಲ್ಲಿ ಹಾಗೂ ತಜ್ಞ ವೈದ್ಯರು ತಾಲ್ಲೂಕು ಆರೋಗ್ಯಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಲ್ಲಿ ಮಾತ್ರ ಅವರುಗಳನ್ನು ಮಿಸ್‌–ಮ್ಯಾಚ್ ಅಡಿಯಲ್ಲಿ ವರ್ಗಾಯಿಸತಕ್ಕದ್ದು.

**6. ಪರಸ್ಪರ ವರ್ಗಾವಣೆ / 10 ವರ್ಷಕ್ಕಿಂತ ಮೇಲ್ಪಟ್ಟು ಒಂದೇ ಸ್ಥಳದಲ್ಲಿ ಕಾರ್ಯನಿರ್ವಹಿಸುತ್ತಿರುವವರ ಪರಸ್ಪರ ವರ್ಗಾವಣೆ ಕುರಿತು:**

ಪರಸ್ಪರ ವರ್ಗಾವಣೆಗಳನ್ನು ಮಾಡಲು ನಿಯಮ–12ರಲ್ಲಿ ಅವಕಾಶ ಕಲ್ಪಿಸಿದ್ದು, ಈ ವರ್ಗಾವಣೆಗಳ ಅವರ ಸೇವಾವಧಿಯಲ್ಲಿ ಎರಡು ಬಾರಿ ಮಾತ್ರ ಪರಸ್ಪರ ವರ್ಗಾವಣೆಗೆ ಅವಕಾಶ ಕಲ್ಪಿಸಲಾಗಿದೆ. ಅಲ್ಲದೇ ಈ ಇಬ್ಬರು ಸಿಬ್ಬಂದಿಯು ಕಡ್ಡಾಯ ಗ್ರಾಮೀಣ ಸೇವೆ ಪೂರ್ಣಗೊಳಿಸಿರಬೇಕು ಹಾಗೂ ತಜ್ಞರ ವರ್ಗಾವಣೆಯನ್ನು ತಪ್ಪು ಹೊಂದಾಣಿಕೆಯಾಗುವುದಿಲ್ಲ ಎಂಬುದನ್ನು ಖಚಿತಪಡಿಸಿಕೊಂಡು ವರ್ಗಾವಣೆ ಮಾಡಲು ಅವಕಾಶ ಕಲ್ಪಿಸಲಾಗಿದೆ. ಆದರೆ 10 ವರ್ಷ ಪೂರ್ಣಗೊಂಡ ವೈದ್ಯರು/ತಜ್ಞರು ಒಬ್ಬರು ಅದೇ ಜಿಲ್ಲೆ ಅಥವಾ ಅದೇ ನಗರದಲ್ಲಿ ಸೇವೆ ಸಲ್ಲಿಸುತ್ತಿರುವ ಮತ್ತೊಂದು ಜಾಗಕ್ಕೆ ವರ್ಗಾವಣೆ ಬಯಸಿದಲ್ಲಿ ಅಂತಹ ಪರಸ್ಪರ ವರ್ಗಾವಣೆಯನ್ನು ಪರಿಗಣಿಸತಕ್ಕದ್ದಲ್ಲ. ಆದರೆ ಬೇರೆ ಜಿಲ್ಲೆಗೆ ಪರಸ್ಪರ ವರ್ಗಾವಣೆ ಕೋರಿದ್ದಲ್ಲಿ ಅದನ್ನು ಪರಿಗಣಿಸತಕ್ಕದ್ದು.

**7. ಪ್ರಾಥಮಿಕ ಆರೋಗ್ಯ ಕೇಂದ್ರ / ಸಮುದಾಯ ಆರೋಗ್ಯ ಕೇಂದ್ರ:**

(ಅ) ಪ್ರಾಥಮಿಕ ಆರೋಗ್ಯ ಕೇಂದ್ರ/ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಗುತ್ತಿಗೆ ಆಧಾರದ ಎಂಬಿಬಿಎಸ್ ವೈದ್ಯರು ಆಯುಷ್/ ದಂತ ಆರೋಗ್ಯಾಧಿಕಾರಿಗಳು ಸೇವೆ ಸಲ್ಲಿಸುತ್ತಿದ್ದಲ್ಲಿ ಅಂತಹ ಹುದ್ದೆಗಳನ್ನು ಖಾಲಿ ಹುದ್ದೆಗಳೆಂದು ಪ್ರಕಟಿಸಿ ಸಮಾಲೋಚನೆ ಮುಖಾಂತರ ಭರ್ತಿ ಮಾಡಲು ಅವಕಾಶ ಕಲ್ಪಿಸತಕ್ಕದ್ದು. ಹಾಗೂ ಎಂಬಿಬಿಎಸ್ ವೈದ್ಯರು ಗುತ್ತಿಗೆ ಆಧಾರದ ಮೇಲೆ 3 ಅಥವಾ 2 ವರ್ಷ ಪೂರ್ಣಗೊಳಿಸಿರುವ (2012 ರಿಂದ 2014ರವರೆಗೆ ನೇಮಕಗೊಂಡವರು) ಹುದ್ದೆಗಳನ್ನೂ ಸಹ ವರ್ಗಾವಣೆ ಸಮಾಲೋಚನೆಯಲ್ಲಿ ಖಾಲಿ ಹುದ್ದೆಯೆಂದು ಪ್ರಕಟಿಸಿ ಉಪಮುಖ್ಯ ವೈದ್ಯಾಧಿಕಾರಿ/ ಹಿರಿಯ ವೈದ್ಯಾಧಿಕಾರಿಗಳನ್ನು ನಗರ ಪ್ರದೇಶದ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ನೇಮಿಸತಕ್ಕದ್ದು. ತದನಂತರವೂ ನಗರ/ ತಾಲ್ಲೂಕು/ ಜಿಲ್ಲಾ ಆಸ್ಪತ್ರೆಗೆ ಸಮೀಪವಿರುವ ಕೇಂದ್ರಗಳಿಗೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವರ್ಗಾವಣೆ ಬಯಸಿದಲ್ಲಿ ಅಂತಹ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಪರಿಗಣಿಸತಕ್ಕದ್ದು. ಅನಂತರ ಖಾಲಿ ಉಳಿಯುವ ಆರೋಗ್ಯ ಕೇಂದ್ರಗಳಿಗೆ 2012, 2013, ಮತ್ತು 2014ರಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡು ಸೇವೆ ಸಲ್ಲಿಸುತ್ತಿರುವವರಿಗೆ (ಎಂಬಿಬಿಎಸ್ ವೈದ್ಯರು) ಮೊದಲಿಗೆ ಸಮಾಲೋಚನೆ ಮುಖಾಂತರ ಖಾಲಿ ಹುದ್ದೆಗಳನ್ನು ಪ್ರಕಟಿಸಿ ಭರ್ತಿ ಮಾಡತಕ್ಕದ್ದು. ಇನ್ನುಳಿದ ಹುದ್ದೆಗಳನ್ನು 2015ರ ನಂತರ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸುತ್ತಿರುವ ಎಂಬಿಬಿಎಸ್ ವೈದ್ಯರಿಗೆ ಮಾತ್ರ ಕರ್ನಾಟಕ ಲೋಕಸೇವಾ ಆಯೋಗದಿಂದ ನೇಮಕಗೊಳ್ಳುವ ತನಕ ಸಮಾಲೋಚನೆ ಮುಖಾಂತರ ಖಾಲಿ ಹುದ್ದೆಗಳಲ್ಲಿ ನೇಮಿಸಲು ಕ್ರಮವಹಿಸತಕ್ಕದ್ದು.

**8. ಇತರೆ:**

(ಅ) ವಯೋನಿವೃತ್ತಿ ಹೊಂದಲು 2 ವರ್ಷ ಸೇವೆ ಬಾಕಿ ಇರುವವರನ್ನು (ದಿನಾಂಕ: 31–8–2015ರವರೆಗೆ) ವರ್ಗಾವಣೆ ಪಟ್ಟಿಯಿಂದ ಕೈಬಿಡಲು ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಅನುಮತಿ ನೀಡಲಾಗಿದೆ.

(ಆ) ಖಾಯಂಸೇವಾ ಪರಿವೀಕ್ಷಣಾ ಸೇವಾವಧಿ ಘೋಷಣೆಯಾಗದೇ ಕಾರ್ಯಕ್ರಮಾಧಿಕಾರಿ ಹುದ್ದೆಯಲ್ಲಿ ಮುಂದುವರೆಯುತ್ತಿರುವವರ ಸೇವೆಯನ್ನು ಹಿಂಪಡೆದು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯಲ್ಲಿ ಮಿಸ್‌–ಮ್ಯಾಚ್ ಅಡಿಯಲ್ಲಿ ನೇಮಿಸತಕ್ಕದ್ದು.

(ಇ) ಇನ್ನುಳಿದಂತೆ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ 2011 ಹಾಗೂ ಆದರಡಿಯಲ್ಲಿ ರಚಿತವಾದ ನಿಯಮಗಳ ರೀತ್ಯ ವರ್ಗಾವಣೆ ಮಾಡಲು ಕ್ರಮವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

**P.R. 523**

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು, ಕಸಬಾ ಹೋಬಳಿ, ಗೊರವನಹಳ್ಳಿ ಶ್ರೀ ಮಹಾಲಕ್ಷ್ಮೀ ದೇವಾಲಯವನ್ನು ಸರ್ಕಾರದ ವಶಕ್ಕೆ ಪಡೆಯುವ ಕುರಿತು.

**ಓದಲಾಗಿದೆ :** ಆಯುಕ್ತರು ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ: ಎಡಿಎಂ. 8.ಸಿಆರ್ 132/2013–14, ದಿನಾಂಕ: 18–06–2015

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಇವರು ಸರ್ಕಾರಕ್ಕೆ ಬರೆದ ದಿನಾಂಕ: 18–06–2015ರ ಪತ್ರದಲ್ಲಿ ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು, ಕಸಬಾ ಹೋಬಳಿ, ಗೊರವನಹಳ್ಳಿ ಗ್ರಾಮದ ಶ್ರೀ ಮಹಾಲಕ್ಷ್ಮೀ ದೇವಾಲಯವನ್ನು ಸರ್ಕಾರದ ವಶಕ್ಕೆ ಪಡೆಯುವ ಕುರಿತು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ ಸೆಕ್ಷನ್ 43ರನ್ವಯ ಉಪವಿಭಾಗಾಧಿಕಾರಿ, ತುಮಕೂರು ಉಪವಿಭಾಗ ಇವರು ದೇವಾಲಯದ ಟ್ರಸ್ಟ್‌ನ ಅಧ್ಯಕ್ಷರಾದ ಶ್ರೀ ಗಂಗಯ್ಯ ಇವರಿಗೆ ದಿನಾಂಕ: 05–05–2015, 15–05–2015 ಮತ್ತು 29–05–2015ರಂದು ನೋಟೀಸ್‌ಗಳನ್ನು ನೀಡಿ, ವಿಚಾರಣೆ ನಡೆಸಿ ಈ ಕೆಳಕಂಡಂತೆ ವರದಿಯನ್ನು ಸಲ್ಲಿಸಿರುತ್ತಾರೆ:–

1. ಗೊರವನಹಳ್ಳಿ ಶ್ರೀ ಮಹಾಲಕ್ಷ್ಮೀ ದೇವಾಲಯದ ಟ್ರಸ್ಟ್‌ನವರ ವಿರುದ್ಧ ದೇವಾಲಯದ ಬೆಳ್ಳಿ, ಬಂಗಾರ ಒಡವೆಗಳನ್ನು ತೆಗೆದುಕೊಂಡು ನಕಲಿ ಒಡವೆಗಳನ್ನು ಇಟ್ಟಿರುತ್ತಾರೆ. ಆಡಿಟ್ ಮಾಡಿಸಿ, ಸುಳ್ಳು ಬಿಲ್ಲುಗಳನ್ನು ಸೃಷ್ಠಿಸಿ ಹಣ ದುರುಪಯೋಗ ಮಾಡಿರುತ್ತಾರೆ ಎಂದು ಶ್ರೀ ನರಸಯ್ಯನ ಪಾಳ್ಯ, ಗೊಲ್ಲರಹಟ್ಟಿ ಗ್ರಾಮಸ್ಥರು ದಿನಾಂಕ: 16–02–2015ರಂದು ಆರಕ್ಷಕ ನಿರೀಕ್ಷಕರರು ಮತ್ತು ತಹಶೀಲ್ದಾರ್ ಇವರು ಮನವಿ ಸಲ್ಲಿಸಿರುತ್ತಾರೆ.
2. ದೇವಸ್ಥಾನದ ಟ್ರಸ್ಟ್ ಬಗ್ಗೆ 1988 ರಲ್ಲಿ ಶ್ರೀ ಮಹಾಲಕ್ಷ್ಮೀ ಚಾರಿಟಬಲ್ ಟ್ರಸ್ಟ್ ಎಂದು ಮತ್ತು 2015 ರಲ್ಲಿ ಪುನರ್ ಸ್ಥಾಪಿತ ಟ್ರಸ್ಟ್ ಎಂದು ಎರಡೂ ಟ್ರಸ್ಟ್ ಗಳು ಒಂದೇ ದೇವಸ್ಥಾನದ ಆಡಳಿತದ ಉದ್ದೇಶಕ್ಕಾಗಿ ಕರ್ನಾಟಕ ಸೊಸೈಟಿ ರಿಜಿಸ್ಟ್ರೇಷನ್ ಆಕ್ಟ್ 1980ರ ಅಡಿಯಲ್ಲಿ ನೊಂದಣಿಯಾಗಿರುತ್ತದೆ. ಸದರಿ ದೇವಸ್ಥಾನದ ಆಸ್ತಿಯ ಬಗ್ಗೆ ಎರಡೂ ಟ್ರಸ್ಟ್‌ಗಳು ಸ್ಥಳೀಯ ನ್ಯಾಯಾಲಯದಲ್ಲಿ ಮೂಲ ದಾವೆ ಸಂಖ್ಯೆ: 27/2015ನ್ನು ದಾಖಲಿಸಿದೆ. ಪ್ರಕರಣವು ಮಧುಗಿರಿ ಸಿವಿಲ್ ನ್ಯಾಯಾಲಯಲ್ಲಿ ವಿಚಾರಣೆ ಹಂತದಲ್ಲಿರುತ್ತದೆ.
3. ಮೂಲ ದೇವಸ್ಥಾನವು ಶ್ರೀಮತಿ ಮಾತೆ ಕಮಲಮ್ಮ ಸೇವಾ ಟ್ರಸ್ಟ್ 1402/1999–2000 ಎಂದು ನೊಂದಣಿಯಾಗಿರುತ್ತದೆ. ಮೂಲ ದಾವೆ ಸಂಖ್ಯೆ: 184/1996, 217/1997 ಮತ್ತು 48/2000ರಲ್ಲಿ ಆಗಿನ ಮಹಾಲಕ್ಷ್ಮೀ ಚಾರಿಟಬಲ್ ಟ್ರಸ್ಟ್‌ನ ಧರ್ಮದರ್ಶಿಗಳಾದ ಶ್ರೀಮತಿ ಮಾತೆ ಕಮಲಮ್ಮ ಶ್ರೀಮತಿ ಲಲಿತಮ್ಮ (ಈಗಿನ ಧರ್ಮದರ್ಶಿಗಳು) ಹಾಗೂ ಪ್ರಧಾನ ಅರ್ಚಕರು, ಧರ್ಮದರ್ಶಿಗಳಾದ ಶ್ರೀ ಪ್ರಸನ್ನಕುಮಾರ್ ಇನ್ನಿತರ ನಡುವೆ ರಾಜಿ ಸಂಧಾನವಾಗಿದ್ದು, ರಾಜಿ ಸಂಧಾನದಂತೆ ಸರ್ಕಾರವು ದೇವಸ್ಥಾನಕ್ಕಾಗಿ ಕೆಲವು ಆಸ್ತಿಗಳನ್ನು ನೀಡಿದ್ದು, ಕಮಲಮ್ಮ ಇವರಿಗೆ ವಹಿವಾಟುದಾರರಾಗಿ ನೇಮಿಸಲಾಗಿರುತ್ತದೆ. ಎದುರುದಾರರಾದ ಧರ್ಮದರ್ಶಿ ಲಲಿತಮ್ಮ ಪ್ರಧಾನ ಅರ್ಚಕರಾದ ಶ್ರೀ ಪ್ರಸನ್ನಕುಮಾರ್ ಇವರಿಗೆ ದೇವಸ್ಥಾನದ ಚರ–ಸ್ಥಿರಾಸ್ತಿಯಲ್ಲಿ ಯಾವುದೇ ಹಕ್ಕು ಇರುವುದಿಲ್ಲ. ಅರ್ಚಕರಿಗೆ ತಿಂಗಳಿಗೆ ರೂ. 4000/– ಸಂಬಳ ಹಾಗೂ ರೂ. 6000/– ಹೆಚ್ಚು ಕಟ್ಲೆ ಸಂಭಾವನೆ ನೀಡಬೇಕಾಗಿದ್ದು, ದೇವಸ್ಥಾನ ಟ್ರಸ್ಟಿಗಳನ್ನು ಬಿಟ್ಟು ಲಕ್ಷ್ಮೀ ವಿಗ್ರಹವನ್ನಾಗಲೀ, ಶ್ರೀ ಚಕ್ರವನ್ನಾಗಲೀ ದೇವಸ್ಥಾನದ ಅವರಣದಲ್ಲಿ ಎದುರುದಾರರಾದ ಲಲಿತಮ್ಮ, ಪ್ರಸನ್ನಕುಮಾರ್, ಇತರರು ಮಾರಾಟ ಮಾಡಬಾರದೆಂದು, ದೇವಸ್ಥಾನದ ಎಲ್ಲಾ ರೀತಿಯ ಆದಾಯ, ಬಂಗಾರ, ಬೆಳ್ಳಿ, ಹಣ ಮತ್ತು ಇನ್ನಿತರೆ ಎಲ್ಲಾ ವಸ್ತುಗಳು ದೇವಸ್ಥಾನಕ್ಕೆ ಸೇರಬೇಕೆಂದು ಅರ್ಚಕರಿಗೆ ತಿಂಗಳಿಗೆ ಮೂರು ತುಂಬಿದ ಹಿಡಿಯಷ್ಟು ಅಕ್ಕಿ ನೀಡಬೇಕೆಂದು ಅರ್ಚಕರಿಗೆ ತಿಂಗಳಿಗೆ 60 ಸೀರೆ ಮತ್ತು ಬ್ಲೌಸ್ ಪೀಸ್ ನೀಡಬೇಕೆಂದು, ದೇವಸ್ಥಾನದ ಎಲ್ಲಾ ಹುಂಡಿ ತಟ್ಟೆ ಕಾಸು ಮತ್ತು ಎಲ್ಲಾ ರೀತಿಯ ದೇಣಿಗೆಗಳು ದೇವಸ್ಥಾನದ ಟ್ರಸ್ಟ್‌ಗೆ ಹೋಗಬೇಕೆಂದು, ಅರ್ಚಕರ ಮಗ ಸುಬ್ರಹ್ಮಣ್ಯರಿಗೆ ಮುಂದೆ ಹೆಚ್ಚುವರಿ ಅರ್ಚಕ ಹುದ್ದೆ ನೀಡಬೇಕೆಂದು ಎದುರುದಾರರಾದ ಶ್ರೀಮತಿ ಲಲಿತಮ್ಮ ಅರ್ಚಕರಾದ ಶ್ರೀ ಪ್ರಸನ್ನಕುಮಾರ್ ಇವರು ಯಾವುದೇ ಸ್ಥಳೀಯ ರಾಜಕೀಯ ಮಾಡಬಾರದೆಂದು ಮತ್ತು ಕಮಲಮ್ಮನವರ ಜೀವಾವಧಿಗೆ ಮಾತ್ರ ಹಣ ಧಾನ್ಯ, ಸೀರೆ ನೀಡಲು ಪ್ರಸನ್ನಕುಮಾರ್ ಇವರಿಗೆ ಅರ್ಚಕ ಹುದ್ದೆ ಪುನರ್ ಸ್ಥಾಪಿಸುವ ಕುರಿತಂತೆ ಮಾನ್ಯ ಸಿವಿಲ್ ನ್ಯಾಯಾಲಯ ಕೊರಟಗೆರೆ ತಾಲ್ಲೂಕಿನಲ್ಲಿ ಮೂಲ ದಾವೆ ಸಂಖ್ಯೆ: 48/2000ರಲ್ಲಿ ರಾಜಿ ಡಿಕ್ರಿ ಆಗಿರುತ್ತದೆ. ಇದನ್ನು ಟ್ರಸ್ಟಿನಲ್ಲಿರುವ ಧರ್ಮದರ್ಶಿಗಳು ಹಾಗೂ ಪ್ರಧಾನ ಅರ್ಚಕರು ಉಲ್ಲಂಘಿಸಿ ಸಾರ್ವಜನಿಕ ಹಣವನ್ನು ಮತ್ತು ದೇವಾಲಯದ ಆಸ್ತಿಯನ್ನು ದುರುಪಯೋಗಪಡಿಸಿಕೊಂಡಿರುತ್ತಾರೆ.
4. ಪ್ರಧಾನ ಅರ್ಚಕರಾದ ಶ್ರೀ ಪ್ರಸನ್ನಕುಮಾರ್ , ಇವರ ಪತ್ನಿ ಶ್ರೀಮತಿ ಲಲಿತಮ್ಮ ಹಾಗೂ ಇತರೆ ಧರ್ಮದರ್ಶಿಗಳು ರಾಜಿ ಡಿಕ್ರಿಯಂತೆ ಸದರಿ ದೇವಸ್ಥಾನದ ಚರ–ಸ್ಥಿರಾಸ್ತಿಯ ಮೇಲೆ ಯಾವುದೇ ಹಕ್ಕಿಲ್ಲದಿದ್ದರೂ ದುರುದ್ದೇಶದಿಂದ ಅನೇಕ ಟ್ರಸ್ಟ್‌ಗಳನ್ನು ಹುಟ್ಟುಹಾಕಿ ದೇವಸ್ಥಾನದ ಚರ–ಸ್ಥಿರಾಸ್ತಿಯನ್ನು ದುರುಪಯೋಗ ಮಾಡಿರುತ್ತಾರೆ.

   ಇದಲ್ಲದೆ ದೇವಸ್ಥಾನದ ಪಕ್ಕದಲ್ಲಿ ಖಾತೆ/ಅಸೆಸ್‌ಮೆಂಟ್ ಸಂಖ್ಯೆ: 109 ರಲ್ಲಿ ಮಹಾಲಕ್ಷ್ಮೀ ದೇವಸ್ಥಾನ ಎಂದು ಖಾತೆ ಇಲ್ಲದಿದ್ದರೂ ಸಹ ಮಹಾಲಕ್ಷ್ಮೀ ಎಂಪೋರಿಯಂ ಎಂದು ಖಾತೆ ಮಾಡಿಸಿ ಮೂರು ಅಂಗಡಿ ಮಳಿಗೆಗಳನ್ನು ಹಾಗೂ ಒಂದು ಮಾತೆ ಕಮಲಮ್ಮ ರವರ ಸಮಾಧಿಯನ್ನು ನಿರ್ಮಾಣ ಮಾಡಿ ಅಲ್ಲಿ ಶ್ರೀ ಲಕ್ಷ್ಮೀ ದೇವಿಯ ವಿಗ್ರಹವನ್ನು ಪ್ರತಿಷ್ಠಾಪಿಸಿ ಭಕ್ತಾದಿಗಳಿಂದ ಕಾಣಿಕೆ, ಹಣ, ದೇಣಿಗೆಗಳನ್ನು ವಸೂಲಿ ಮಾಡುತ್ತಿದ್ದು ಯಾವುದೇ ಕಂದಾಯ ಮತ್ತು ತೆರಿಗೆ ಪಾವತಿಸದೇ ಸರ್ಕಾರಕ್ಕೆ ಮತ್ತು ದೇವಸ್ಥಾನಕ್ಕೆ ಮೋಸ ಮಾಡಿರುತ್ತಾರೆ.
5. ದೇವಸ್ಥಾನದಲ್ಲಿ ಊಟ, ವಸತಿಗಾಗಿ, ಕೊಠಡಿಗಳ ವ್ಯವಸ್ಥೆ ಇದ್ದರೂ ಶ್ರೀಮತಿ ಲಲಿತಮ್ಮ ಮತ್ತು ಪ್ರಧಾನ ಅರ್ಚಕರು ಶ್ರೀ ಹೆಚ್.ಸಿ. ಪ್ರಸನ್ನಕುಮಾರ್ ಇವರು ದೇವಸ್ಥಾನದಿಂದ ಕೇವಲ 1 ಕಿ.ಮಿ. ವ್ಯಾಪ್ತಿಯ ಒಳಗೆ **"ಕಮಲ ಪ್ರಿಯ"** ಎಂಬ ಹೆಸರಿನಲ್ಲಿ 18 ರೂಂಗಳಿರುವ ವಸತಿ ಗೃಹಗಳನ್ನೊಳಗೊಂಡ ಹೋಟೆಲ್ ಅನ್ನು ಸುಮಾರು ರೂ. 200 ಕೋಟಿ ಮೊತ್ತದಲ್ಲಿ ನಿರ್ಮಾಣ ಮಾಡಿದ್ದು, ಖಾತೆ ಅಸೆಸ್‌ಮೆಂಟ್ ಸಂ: 130, 130ಎ, 131 ರಲ್ಲಿ ಶ್ರೀ ಲಕ್ಷ್ಮೀ, ಶ್ರೀ ಪ್ರಸಾದ್, ಶ್ರೀ ಸುಬ್ರಹ್ಮಣ್ಯ (ಹಾಲಿ ಅರ್ಚಕ( ಬಿನ್ ಪ್ರಸನ್ನಕುಮಾರ್ (ಹಾಲಿ ಪ್ರಧಾನ

ಅರ್ಚಕ ಮತ್ತು ಧರ್ಮದರ್ಶಿ) ಇವರ ಹೆಸರಿನಲ್ಲಿ ಜಂಟಿ ಖಾತೆ ಇರುತ್ತದೆ. ದೇವಸ್ಥಾನದ ಭಕ್ತಾದಿಗಳಿಂದ ಹಣ ಪಡೆದು ಊಟ, ವಸತಿ ವ್ಯವಸ್ಥೆಯನ್ನು ನೀಡಿ ದೇವಸ್ಥಾನಕ್ಕೆ ಆದಾಯದ ಕೊರತೆ ಉಂಟು ಮಾಡಿ ದೇವಸ್ಥಾನಕ್ಕೆ ಮೋಸ ಮಾಡಿರುತ್ತಾರೆ.

6. ದೇವಸ್ಥಾನಕ್ಕೆ ಬರುವ ಭಕ್ತರಿಗೆ ವಸತಿ ಸೌಕರ್ಯ ನೀಡಲು, 2 ಅಂತಸ್ತಿನ ಕಟ್ಟಡ ನಿರ್ಮಿಸಿದ್ದು, ಸುಮಾರು 13 ವಸತಿ ಗೃಹಗಳಿರುತ್ತದೆ. ಅದನ್ನು ಪಾಲಿಟೆಕ್ನಿಕ್ ವಿದ್ಯಾರ್ಥಿಗಳಿಗೆ ವಸತಿ ವ್ಯವಸ್ಥೆಗಾಗಿ ನೀಡಿ ಭಕ್ತಾದಿಗಳಿಗೆ ವಸತಿ ವ್ಯವಸ್ಥೇಯ ಕೊರತೆಯನ್ನುಂಟು ಮಾಡಿ ಖಾಸಗಿ ಕಲ್ಯಾಣ ಮಂಟಪ, ಖಾಸಗಿ ವಸತಿ ಗೃಹಗಳನ್ನು ನಿರ್ಮಿಸಿ ಭಕ್ತಾಧಿಗಳಿಗೆ ನೀಡಿ ದೇವಸ್ಥಾನಕ್ಕೆ ಬರಬೇಕಾದ ಆದಾಯವನ್ನು ತಪ್ಪಿಸಿ ತಮ್ಮ ಖಾಸಗಿ ಹೋಟೆಲ್‌ನ ಆದಾಯವನ್ನು ಹೆಚ್ಚಿಸಿಕೊಂಡಿರುತ್ತಾರೆ.

7. ದೇವಸ್ಥಾನದಲ್ಲಿ ವಸತಿ/ ಕಲ್ಯಾಣ ಮಂಟಪದ ವ್ಯವಸ್ಥೆ ಇದ್ದರೂ ಸಹ ಶ್ರೀ ಮಂಜುನಾಥ್ ಎಂಬ ಧರ್ಮದರ್ಶಿಯು ಅವರ ತಮ್ಮನ ಹೆಸರಿನಲ್ಲಿ ಖಾತೆ ಸಂಖ್ಯೆ: 135 ಮತ್ತು 135/1ರಲ್ಲಿ ಶ್ರೀ ಎಸ್. ಶಿವಣ್ಣ ಬಿನ್ ನಾಗಪ್ಪ ಎಂಬ ಹೆಸರಿನಲ್ಲಿ ಕಲ್ಯಾಣ ಮಂಟಪ ಕಟ್ಟಿ ಟ್ರಸ್ಟ್‌ನ ನಿಬಂಧನೆಯನ್ನು ಉಲ್ಲಂಘಿಸಿ ದೇವಸ್ಥಾನಕ್ಕೆ ಬರುವ ಆದಾಯದಲ್ಲಿ ಕೊರತೆಯುಂಟು ಮಾಡಿ ದೇವಾಲಯದ ಆದಾಯಕ್ಕೆ ಆರ್ಥಿಕ ನಷ್ಟ ಉಂಟು ಮಾಡುತ್ತಿದ್ದಾರೆ.

8. ಅಧ್ಯಕ್ಷರಾದ ಶ್ರೀ ಟಿ.ಆರ್. ಶ್ರೀರಂಗಯ್ಯ ಇವರು ಒಕ್ಕಲಿಗ ಕೋಮಿಗೆ ಸೇರಿದ್ದು, ಸದರಿ ಕೋಮಿಗೆ ಸೇರಿದ 7 ಜನರನ್ನು ಟ್ರಸ್ಟ್‌ನಲ್ಲಿ ಅಕ್ರಮವಾಗಿ ಸೇರಿಸಿಕೊಂಡಿರುತ್ತಾರೆ. ತಮಗೆ ಬೇಡದ ವ್ಯಕ್ತಿಗಳನ್ನು ನಿಯಮಗಳನ್ನು ಪಾಲಿಸದೇ ತೆಗೆದುಹಾಕಿರುತ್ತಾರೆ. ಅಧ್ಯಕ್ಷರು ಈವರೆವಿಗೂ ಸಭಾ ನಡವಳಿಯ ಪುಸ್ತಕವನ್ನು ಸರ್ಕಾರದ ಸುಪರ್ಧಿಗೆ ನೀಡದೇ ತಮ್ಮ ಬಳಿಯೇ ಅಕ್ರಮವಾಗಿ ಇಟ್ಟುಕೊಂಡಿರುತ್ತಾರೆ.

9. ಕಾಲಕಾಲಕ್ಕೆ ಅಧ್ಯಕ್ಷರು ಧರ್ಮದರ್ಶಿಗಳನ್ನು ಬದಲಾಯಿಸಿರುವುದನ್ನು ಸರ್ಕಾರಕ್ಕೆ ಮತ್ತು ನಿಬಂಧಕರು, ಸಹಕಾರ ಸಂಘಗಳ ಇಲಾಖೆ, ತುಮಕೂರು ಇವರಿಗೆ ನೀಡಿರುವುದಿಲ್ಲ. ಅಧ್ಯಕ್ಷರು ಪ್ರತಿ ವರ್ಷವೂ ಕಾಲಕಾಲಕ್ಕೆ ಸಾಮಾನ್ಯ ಸಭೆ ನಡೆಸದೇ ಇರುವುದು ಮತ್ತು ಬ್ಯಾಲೆನ್ಸ್ ಶೀಟ್, ಆದಾಯ ವೆಚ್ಚ, ಪತ್ರ ಲೆಕ್ಕ ತಪಾಸಣೆ ವರದಿಯನ್ನು ಸರ್ಕಾರಕ್ಕೆ ಮತ್ತು ಸಂಬಂಧಿಸಿದ ಇಲಾಖೆಗೆ ನೀಡಿರುವುದಿಲ್ಲ. ಕರ್ನಾಟಕ ಸೊಸೈಟಿ ರಿಜಿಸ್ಟ್ರೇಷನ್ ಆಕ್ಟ್ 1960ರ ನಿಯಮ 11,12,13,20 ಅನ್ನು ಉಲ್ಲಂಘಿಸಿರುತ್ತಾರೆ. ಅಧ್ಯಕ್ಷರು ಮತ್ತು ಟ್ರಸ್ಟಿಗಳ ವಿರುದ್ಧ ಕೊರಟಗೆರೆ ಪೋಲಿಸ್ ಠಾಣೆಯಲ್ಲಿ ಅಪರಾದ ಸಂಖ್ಯೆ: 328/2013ರಂತೆ ತಹಶೀಲ್ದಾರ್ ಕೊರಟಗೆರೆ ಇವರು ಮೊಕದ್ದಮೆ ಹೂಡಿದ್ದು, ಟ್ರಸ್ಟಿಗಳು ಜಾಮೀನಿನ ಮೇಲೆ ಹೊರಗಡೆ ಬಂದಿರುತ್ತಾರೆ.

10. ಅಧ್ಯಕ್ಷರು ಮತ್ತು ಟ್ರಸ್ಟಿಗಳು ದೇವಾಲಯದ ಅವರಣದಲ್ಲಿರುವ ಅಂಗಡಿ ಮಳಿಗೆಗಳಲ್ಲಿ ಸ್ವಜನ ಪಕ್ಷಪಾತ ಮಾಡಿ ತಮ್ಮ ಸಂಬಂಧಿಗಳಿಗೆ ಬಾಡಿಗೆಗೆ ಅಕ್ರಮವಾಗಿ ನೀಡಿರುತ್ತಾರೆ. ಸದರಿ ಅಮಗಡಿಗಳಿಂದ ಸರಿಯಾಗಿ ಬಾಡಿಗೆಯನ್ನು ಸಹ ಪಡೆಯುತ್ತಿಲ್ಲ.

11. ಟ್ರಸ್ಟಿಗಳಲ್ಲಿ ಉಚ್ಚ ನ್ಯಾಯಾಲಯದ ಅಧಿಕಾರಿಯಾದ ಶ್ರೀ ವಾಸುದೇವ್ ಬಿ.ಜಿ. ಇವರು ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಶ್ರೀನಿವಾಸ್ ಹಾಗೂ ಶ್ರೀ ಮುರಳಿಕೃಷ್ಣ ಇವರು ಸರ್ಕಾರಿ ನೌಕರರಾಗಿದ್ದು, ಬೇರೆ ಜಿಲ್ಲೆಯಲ್ಲಿ ವಾಸಿಸುವವರನ್ನು ಅಕ್ರಮವಾಗಿ ಧರ್ಮದರ್ಶಿಗಳನ್ನಾಗಿ ಸೇರಿಸಿಕೊಂಡಿರುತ್ತಾರೆ ಇವರುಗಳು ದೇವಸ್ಥಾನದ ಹುಂಡಿ ಎಣಿಕೆ ಕಾರ್ಯ ಮಾಡುವಾಗ ವಿದೇಶಿ ಕರೆನ್ಸಿಗಳನ್ನು ಅಕ್ರಮವಾಗಿ ತೆಗೆದುಕೊಂಡು ಹೋಗಿರುತ್ತಾರೆ.

12. ಗೊರವನಹಳ್ಳಿ ಗ್ರಾಮದಲ್ಲಿನ ಚರಾಸ್ತಿ ಮತ್ತು ಸ್ಥಿರಾಸ್ತಿಗಳನ್ನು ವಿಲೇವಾರಿ ಮಾಡುತ್ತಿದ್ದಾರೆ. ಸ್ಥಳೀಯ ಗ್ರಾಮಸ್ಥರಿಗೂ ಹಾಲಿ ಧರ್ಮದರ್ಶಿಗಳ ಮಧ್ಯೆ ವೈಮನಸ್ಸು, ಅಶಾಂತಿ ಉಂಟಾಗಿರುತ್ತದೆ. ಸುಮಾರು ರೂ. 15.00 ಕೋಟಿ ಮೌಲ್ಯವುಳ್ಳ ದೇವಸ್ಥಾನವನ್ನು ಬೀಗ ಹಾಕಿ ಧರ್ಮದರ್ಶಿಗಳ ವಿರುದ್ಧ ಸ್ಥಳೀಯರು ಪೋಲಿಸರಲ್ಲಿ ದೂರು ನೀಡಿದ್ದು. ಅಪರಾಧ ಸಂಖ್ಯೆ: 66/2015 ಮತ್ತು ಸ್ಥಳೀಯರ ವಿರುದ್ಧ ಧರ್ಮದರ್ಶಿಗಳ ದೂರು ನೀಡಿದ್ದು. ಅಪರಾಧ ಸಂಖ್ಯೆ: 67/2015ರಂತೆ ಪರಸ್ಪರ ಕ್ರಿಮಿನಲ್ ಮೊಕದ್ದಮೆಗಳನ್ನು ದಾಖಲು ಮಾಡಿರುತ್ತಾರೆ. ಪೊಲೀಸ್ ಇನ್ಸ್‌ಪೆಕ್ಟರ್, ಕೊರಟಗೆರೆ ಇವರು ಅಧ್ಯಕ್ಷರು ಮತ್ತು ಸ್ಥಳೀಯ ಗ್ರಾಮಸ್ಥರ ವಿರುದ್ಧ ಅಪರಾಧ ಸಂಖ್ಯೆ: 63/2015 ದಿನಾಂಕ: 20-02-2015ರಲ್ಲಿ ಕೊರಟಗೆರೆ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಮೊಕ್ಕದ್ದಮೆ ಹೂಡಿರುತ್ತಾರೆ.

13. ಸದರಿ ಧರ್ಮದರ್ಶಿಯವರ ಮಗನಾದ ಶ್ರೀ ಟಿ.ಆರ್. ನಟರಾಜು ಇವರು ದೇವಾಲಯದ ಸುಮಾರು 40x30 ಅಡಿಗಳನ್ನು ಅಕ್ರಮವಾಗಿ ಧರ್ಮದರ್ಶಿಗಳ ಕುಮ್ಮಕ್ಕಿನಿಂದ ಒತ್ತುವರಿ ಮಾಡಿಕೊಂಡು 60 x 30 ಅಡಿ ಪ್ರದೇಶದಲ್ಲಿ ಶ್ರೀ ಲಕ್ಷ್ಮೀರಂಗನಾಥ ಸ್ವಾಮಿ ದೇವಾಲಯವನ್ನು ಕಟ್ಟಿ ಟ್ರಸಿನ ನಿಬಂಧನೆಯನ್ನು ಉಲ್ಲಂಘಿಸಿ ಸ್ವಾರ್ಥಕ್ಕೆ ದೇವಸ್ಥಾನ ಆದಾಯವನ್ನ ಬಳಸಿಕೊಂಡಿರುತ್ತಾರೆ.

14. ಶ್ರೀ ಮಹಾಲಕ್ಷ್ಮೀ ದೇವಾಲಯದ ಹೆಸರಿನಲ್ಲಿ ಇರಬೇಕಾದ ದೇವಾಲಯದ ಆಸ್ತಿಯನ್ನು ತೀತಾ ಗ್ರಾಮ ಪಂಚಾಯ್ತಿಯಲ್ಲಿ ಅಕ್ರಮವಾಗಿ ಅಧ್ಯಕ್ಷರು/ಕಾರ್ಯದರ್ಶಿಗಳು ಶ್ರೀ ಮಹಾಲಕ್ಷ್ಮೀ ದೇವಸ್ಥಾನ ಟ್ರಸ್ಟ್, ಗೊರವನಹಳ್ಳಿ ಎಂದು ಅಕ್ರಮವಾಗಿ ಖಾತೆ ಮಾಡಿಸಿಕೊಂಡಿರುತ್ತಾರೆ.

15. ದೇವಸ್ಥಾನದ ಆಡಳಿತ ಮಂಡಳಿಯಿಂದ ಶ್ರೀ ಆನಂದಗೂರುಜಿ ಇವರು ದಿನಾಂಕ: 27-11-2013 ಮತ್ತು 28-11-2013 ರಂದು ಉಚಿತವಾಗಿ ಲಕ್ಷ್ಮೀ ನಾಣ್ಯ, ಸೀರೆ ನೀಡುತ್ತಾರೆಂದು ಟಿ.ವಿ. ಮಾಧ್ಯಮಗಳಲ್ಲಿ ಪ್ರಚಾರ ನೀಡಿದ್ದರಿಂದ ಹಾಗೂ ಯಾವುದೇ ತಾಲ್ಲೂಕು ಆಡಳಿತ ಅಥವಾ ಜಿಲ್ಲಾ ಆಡಳಿತದಿಂದ ಅನುಮತಿ ಪಡೆಯದೆ, ಭಕ್ತಾಧಿಗಳಿಗೆ ಮೂಲಭೂತ ಸೌಕರ್ಯಗಳನ್ನು ನೀಡದೆ, ಪಾರ್ಕಿಂಗ್, ವ್ಯವಸ್ಥೆ, ಕುಡಿಯುವ ನೀರಿನ ವ್ಯವಸ್ಥೆ, ಊಟದ ವ್ಯವಸ್ಥೆ, ಆರೋಗ್ಯ ಚಿಕಿತ್ಸಾಲಯ, ತಂಗಲು ಸ್ಥಳಾವಕಾಶ ನೀಡದೆ ಲಕ್ಷಾಂತರ ಜನರು ಬಂದು ಸಾರ್ವಜನಿಕ ಪ್ರಾಣ ಮತ್ತು ಅವಗುಣಗಳ ಜೊತೆ ಚೆಲ್ಲಾಟವಾಡಿ ಭಕ್ತಾಧಿಗಳ ಹಿತರಕ್ಷಣೆಯನ್ನು ಕಡೆಗಣಿಸಿ ಕೇವಲ ಹಣ ಮಾಡುವ ಉದ್ದೇಶದಿಂದ ವ್ಯಾಪಕ ಪ್ರಚಾರ ನೀಡಿ ಅವ್ಯವಸ್ಥೆ ಮಾಡಿದ್ದರಿಂದ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಇವರು ಟ್ರಸ್ಟ್‌ನ ಸದಸ್ಯರು ವಿರುದ್ಧ ಕ್ರಿಮಿನಲ್ ಮೊಕದ್ದಮೆ ಸಿ.ಆರ್. ಸಂಖ್ಯೆ: 328/2013ರನ್ನು ಹೂಡಿದ್ದು, ಎಲ್ಲಾ ಟ್ರಸ್ಟಿಗಳು ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ.

16. ಮಹಾಲಕ್ಷ್ಮೀ ದೇವಸ್ಥಾನದ ಮಹಾಲಕ್ಷ್ಮೀ ಚಾರಿಟೇಬಲ್ ಟ್ರಸ್ಟ್‌ನ ಅಂಗ ಸಂಸ್ಥೆಯಾಗಿ ಪ್ರಾಥಮಿಕ ಮತ್ತು ಪ್ರೌಢಶಾಲೆಯನ್ನು ಶ್ರೀ ಮಹಾಲಕ್ಷ್ಮೀ ಆಂಗ್ಲ ಪ್ರೌಢಶಾಲೆ ಮತ್ತು ಶ್ರೀ ಮಹಾಲಕ್ಷ್ಮೀ ವಿದ್ಯಾ ಮಂದಿರವೆಂದು ಸ್ಥಾಪಿಸಿ, ಸದರಿ ವಿದ್ಯಾ ಮಂದಿರದಲ್ಲಿ ಎಲ್.ಕೆ.ಜಿ. ಮತ್ತು ಯು.ಕೆ.ಜಿ. 100 ವಿದ್ಯಾರ್ಥಿಗಳು ಹಾಗೂ 1 ರಿಂದ 10 ನೇ ತರಗತಿಯಲ್ಲಿ ಸುಮಾರು 400 ವಿದ್ಯಾರ್ಥಿಗಳು ಇದ್ದು, ಈ ಶಿಕ್ಷಣ ಸಂಸ್ಥೆಗೆ ಶಿಕ್ಷಕರ ನೇಮಕಾತಿಯಲ್ಲಿ ಸ್ವಜನ ಪಕ್ಷಪಾತ ಮತ್ತು ಯಾವುದೇ ರೋಸ್ಟರ್ ಪದ್ಧತಿಯನ್ನು ಪಾಲಿಸದೇ ಅನರ್ಹರನ್ನು ಹಾಗೂ ಒಂದೇ ಕೋಮಿನವರನ್ನು ನೇಮಕಾತಿ ಮಾಡಿರುವುದಾಗಿ ದೂರು ಇರುತ್ತದೆ. ಮಹಾಲಕ್ಷ್ಮೀ ಪಾಲಿಟೆಕ್ನಿನಿಕ್ ಕಾಲೇಜು ನಡೆಯುತ್ತಿದ್ದು, ಸದರಿ ಕಾಲೇಜಿಗೆ ವರ್ಷ ಒಂದಕ್ಕೆ ರೂ. 25.00 ಲಕ್ಷಗಳನ್ನು ದೇಣಿಗೆ ರೂಪದಲ್ಲಿ ನೀಡಿದ್ದು, ದೇವಸ್ಥಾನದ ವತಿಯಿಂದ ದವಸ ಧಾನ್ಯಗಳನ್ನು

ಹಾಗೂ ದೇವಸ್ಥಾನದ ಕಟ್ಟಡಗಳನ್ನು ವಿದ್ಯಾರ್ಥಿಗಳಿಗೆ ಹಾಗೂ ಪಾಲಿಟೆಕ್ನಿಕ್ ಕಾಲೇಜಿನ ಉಪನ್ಯಾಸಕರಿಗೆ ವಸತಿಗಾಗಿ ನೀಡುತ್ತಿರುವುದರಿಂದ ಲಕ್ಷಾಂತರ ಭಕ್ತಾಧಿಗಳಿಗೆ ಊಟದ ವ್ಯವಸ್ಥೆ ಹಾಗೂ ವಸತಿ ವ್ಯವಸ್ಥೆ ಕುಂಠಿತವಾಗಿರುವುದು ಕಂಡುಬಂದಿರುತ್ತದೆ.

17. ಶ್ರೀ ಶ್ರೀರಂಗಯ್ಯ, ಅಧ್ಯಕ್ಷರು ಇವರು ಅನೇಕ ಬ್ಯಾಂಕ್‌ಗಳಲ್ಲಿ ಸುಮಾರು ರೂ. 6.00 ಕೋಟಿಗಳಿಗೂ ಅಧಿಕ ಮೊತ್ತವನ್ನು ಯಾರ ಗಮನಕ್ಕೂ ತರದೇ ನಿಶ್ಚಿತ ಠೇವಣಿಗಳಲ್ಲಿ ಇರಿಸಿರುತ್ತಾರೆ. ಸುಮಾರು ರೂ. 4.00 ಕೋಟಿಗೂ ಹೆಚ್ಚು ಮೊತ್ತವನ್ನು ಅಕ್ರಮವಾಗಿ ನಿಶ್ಚಿತ ಠೇವಣಿಯಿಂದ (ಎಫ್.ಡಿ) ಬಿಡಿಸಿರುವುದು ಕಂಡುಬಂದಿರುತ್ತದೆ. ಈ ವಿಷಯವನ್ನು ಸಂಬಂಧಿಸಿದ ಇಲಾಖೆ/ ಸರ್ಕಾರದ ಗಮನಕ್ಕೆ ತಂದಿರುವುದಿಲ್ಲ.

ಮೇಲ್ಕಂಡ ಎಲ್ಲಾ ಅಂಶಗಳನ್ನು. ದಾಖಲೆಗಳನ್ನು ಗಮನಿಸಿ ಸದರಿ ದೇವಸ್ಥಾನದ ಎರಡು ಟ್ರಸ್ಟ್‌ನಲ್ಲಿರುವ ಧರ್ಮದರ್ಶಿಗಳು ಮತ್ತು ಪ್ರಧಾನ ಅರ್ಚಕರು ಮತ್ತು ಧರ್ಮದರ್ಶಿಗಳು ಅವರ ಕುಟುಂಬದವರು ದೇವಸ್ಥಾನದ ಚರ–ಸ್ಥಿರಾಸ್ತಿಗಳಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಂಸ್ಥೆಯ ಹಿತಾಸಕ್ತಿಗೆ ವಿರುದ್ಧವಾಗಿ ವರ್ತಿಸಿದ್ದು, ಮಧುಗಿರಿ ಸಿವಿಲ್ ನ್ಯಾಯಾಲಯದ ಪ್ರಕರಣ ಸಂಖ್ಯೆ: ಓ.ಎಸ್. 48/2000ರ ರಾಜಿ ಡಿಕ್ರಿಯಲ್ಲಿ ಅರ್ಚಕರು ಮತ್ತು ಧರ್ಮದರ್ಶಿಗಳು ನಿಬಂಧನೆಗಳನ್ನು ಉಲ್ಲಘಿಸಿದ್ದು, ಸಂಸ್ಥೆಯ ಚರ–ಸ್ಥಿರಾಸ್ತಿಗಳನ್ನು ಪರಬಾರೆ, ವರ್ಗಾವಣೆ ಮಾಡುತ್ತಿದ್ದು, ಲೆಕ್ಕಪರಿಶೋಧನೆ ಮಾಡಿಸದೆ ಕಾನೂನು ಬಾಹಿರವಾಗಿ ಸಾರ್ವಜನಿಕ ಹಣ, ದೇಣಿಗೆಯನ್ನು ದುರ್ವಿನಿಯೋಗ, ದುರ್ವರ್ತನೆ, ಕಾನೂನು ಬಾಹಿರವಾದ ವೆಚ್ಚ, ವಂಚನೆ ಸಾರ್ವಜನಿಕ ಹಣದ ಸ್ವತ್ತಿನ ದುರುಪಯೋಗ ಮಾಡಿರುವುದನ್ನು ಹಾಗೂ ದೇವಸ್ಥಾನದ ಆಡಳಿತದ ಬಗ್ಗೆ ಅನೇಕ ಕ್ರಿಮಿನಲ್, ಸಿವಿಲ್ ವ್ಯಾಜ್ಯಗಳು ಸಂಬಂಧಿಸಿದ ನ್ಯಾಯಾಲಯದಲ್ಲಿ ಇರುತ್ತದೆ. ಸದರಿ ಗ್ರಾಮದಲ್ಲಿ ಕಾನೂನು ಸುವ್ಯವಸ್ಥೆಯ ಪಾಲನೆಗಾಗಿ ಸಾರ್ವಜನಿಕರು, ಭಕ್ತಾಧಿಗಳ ಹಿತಚಿಂತನೆಯಿಂದ ಸಾರ್ವಜನಿಕರ ಚರ–ಸ್ಥಿರ ಸ್ವತ್ತನ್ನು ಕಾಪಾಡುವ ದೃಷ್ಠಿಯಿಂದ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ ಸೆಕ್ಷನ್ 42ರನ್ವಯ ಗೊರವನಹಳ್ಳಿ ಶ್ರೀ ಮಹಾಲಕ್ಷ್ಮೀ ದೇವಾಲಯವನ್ನು **"ಘೋಷಿತ ಸಂಸ್ಥೆ"** ಎಂದು ಘೋಷಿಸಿ ಸದರಿ ದೇವಾಲಯವನ್ನು ಸರ್ಕಾರದ ವಶಕ್ಕೆ ಪಡೆಯುವಂತೆ ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರ ಶಿಫಾರಸ್ಸನ್ನು ಆಧರಿಸಿ, ಪ್ರಸ್ತಾಪಿತ ಕಾಯ್ದೆಯನ್ವಯ ಸದರಿ ದೇವಸ್ಥಾನವನ್ನು **"ಘೋಷಿತ ಸಂಸ್ಥೆ"** ಎಂದು ಘೋಷಿಸಿ ಸರ್ಕಾರದ ವಶಕ್ಕೆ ಪಡೆಯಲು ಆದೇಶ ಹೊರಡಿಸುವಂತೆ ಕೋರಿ, ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 42 ಮುಆಬಿ 2015, ಬೆಂಗಳೂರು, ದಿನಾಂಕ: 21ನೇ ಆಗಸ್ಟ್, 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು ಕಸಬಾ ಹೋಬಳಿ, ಗೊರವನಹಳ್ಳಿ, ಗ್ರಾಮದಲ್ಲಿರುವ ಶ್ರೀ ಮಹಾಲಕ್ಷ್ಮೀ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಅಧಿನಿಯಮ 1997ರ ಸೆಕ್ಷನ್ 42 ಮತ್ತು 43 ರನ್ವಯ **"ಘೋಷಿತ ಸಂಸ್ಥೆ"** ಎಂದು ಘೋಷಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ವಶಕ್ಕೆ ಪಡೆಯಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಉಮಾಪತಿ**

ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ

(ಭೂಮಿ, ಯುಪಿಓಆರ್ & ಮುಜರಾಯಿ)

**P.R. 524**

**SC-50**

## ಶಿಕ್ಷಣ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಬಿ.ಸಿ.ಎ. ಬಿ.ಎಸ್ಸಿ (ಐಟಿ/ಕಂಪ್ಯೂಟರ್ ಸೈನ್ಸ್ ಪದವೀಧರರಿಗೆ ಲ್ಯಾಟರಲ್ ಎಂಟ್ರಿ ಮೂಲಕ ಎಂ.ಸಿ.ಎ. 2ನೇ ವರ್ಷಕ್ಕೆ ಪ್ರವೇಶ ಪ್ರಕ್ರಿಯೆಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ನಡೆಸುವ ಬಗ್ಗೆ

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 101 ಟಿಇಸಿ 2005, ದಿನಾಂಕ: 21–05–2005.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 98 ಟಿಇಸಿ 2013, ದಿನಾಂಕ: 22–08–2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಮೊದಲನೇ ವರ್ಷದ ಎಂ.ಬಿ.ಎ./ಎಂ.ಸಿ.ಎ. ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ Karnataka Section of Candidates for Admission to MBA and MCA Courses Rules, 2005 ನ್ನು ಹೊರಡಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ 2013–14ನೇ ಸಾಲಿನ ಎಐಸಿಟಿಇ ಮಾರ್ಗಸೂಚಿ ಹಾಗೂ ಎಐಸಿಟಿಇ ಪತ್ರ ದಿನಾಂಕ: 16–07–2013ರನ್ವಯ 2013–14ನೇ ಸಾಲಿನಿಂದ ಜಾರಿಗೆ ಬರುವಂತೆ ಬಿ.ಸಿ.ಎ. ಹಾಗೂ ಬಿ.ಎಸ್ಸಿ (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸಿಗೆ ಈ ಕೆಳಕಂಡ ಶೈಕ್ಷಣಿಕ ಅರ್ಹತೆ ಹೊಂದಿರುವ ಅಭ್ಯರ್ಥಿಗಳಿಗೆ ನೇರ ಪ್ರವೇಶಾವಕಾಶ ಕಲ್ಪಿಸಿ ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸುಗೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ಪ್ರವೇಶಾತಿಗೆ ಅನುಮೋದನೆ ನೀಡಿ ಆದೇಶಿಸಿದೆ.

"Provided that students who have completed Bachelor's Degree of minimum 3 yrs. Duration in BCA, B.Sc (IT/Computers Science) with Mathematics as a course at 10+2 level or Graduated level shall be eleigible for admission to second year MCA courses up to a minimum of 20% of sanctioned intake except Andaman, Nicobar, Lakshadweep, Daman and Diu where it shall be 30% will be the supernumerary of the approved intake."

" The eligible candidates seeking admission to 2nd year MCA will be required to qualify at the Entrance Test Conducted by the competent authority."

ಕಳೆದ ವರ್ಷದಂತೆಯೇ ಬಿ.ಸಿ.ಎ. ಹಾಗೂ ಬಿ.ಎಸ್ಸಿ (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಎಂಸಿ.ಎ. 2ನೇ ವರ್ಷಕ್ಕೆ ಲ್ಯಾಟರಲ್ ಎಂಟ್ರಿ ಮೂಲಕ ಶೇ. 20ರಷ್ಟು ಸೀಟುಗಳಿಗೆ ನೇರ ಪ್ರವೇಶಾತಿ ನೀಡುವ ಕುರಿತು Karnataka Section of Candidates for Admission to MBA and MCA Courses Rules, 2005 ಕ್ಕೆ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ ಎಐಸಿಟಿಇ ಮಾರ್ಗಸೂಚಿಯಂತೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ 2015–16ನೇ ಸಾಲಿಗೆ ಬಿ.ಸಿಎ. ಹಾಗೂ ಬಿ.ಎಸ್ಸಿ (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಪ್ರತ್ಯೇಕ ಪ್ರವೇಶ ನಡೆಸಿ (PGCET) ಅದರಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳಿಗೆ ಪ್ರವೇಶಾತಿಯನ್ನು ನೀಡಲು ತೀರ್ಮಾನಿಸಲಾಗಿದೆ. ಅದರಂತೆ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 104 ಟಿಇಸಿ 2015, ಬೆಂಗಳೂರು, ದಿನಾಂಕ: 19ನೇ ಆಗಸ್ಟ್, 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2015–16ನೇ ಸಾಲಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 98 ಟಿಇಸಿ 2013, ದಿನಾಂಕ: 22–08–2013ರ ಮಾಡಿರುವ ಆದೇಶದಂತೆಯೇ, ಬಿ.ಸಿಎ. ಹಾಗೂ ಬಿ.ಎಸ್ಸಿ (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸಿಗೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ಪ್ರವೇಶಾತಿ ನೀಡಲು ಕುರಿತು Karnataka Selection of Candidates for Admission to MBA and MCA Courses Rules, 2005 ಕ್ಕೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ ಈ ಕೆಳಕಂಡ ಷರತ್ತುಗಳೊಂದಿಗೆ ಅನುಮೋದನೆ ನೀಡಿದೆ.

(1) ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂಸಿ.ಎ. ಕೋರ್ಸಿಗೆ ನೇರ ಪ್ರವೇಶ ಪಡೆಯಲಿಚ್ಚಿಸುವ ಬಿಸಿ.ಎ. ಹಾಗೂ ಬಿ.ಎಸ್ಸಿ. (ಐಟಿ/ಕಂಪ್ಯೂಟರ್ ಸೈನ್ಸ್) ಅಭ್ಯರ್ಥಿಗಳಿಗೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ಪ್ರತ್ಯೇಕ ಪ್ರವೇಶ ನಡೆಸಿ. ಅದರಲ್ಲಿ ಅರ್ಹತೆ ಹೊಂದಿದವರಿಗೆ 2ನೇ ವರ್ಷ ಎಂ.ಸಿ.ಎ. ಕೋರ್ಸಿಗೆ ಪ್ರವೇಶಾವಕಾಶ ಕಲ್ಪಿಸತಕ್ಕದ್ದು.

(2) ಎಂಸಿ.ಎ. ಕೋರ್ಸಿಗೆ ಮಂಜೂರಾಗಿರುವ ಕಳೆದ ಸಾಲಿನ ಇಂಟೇಕ್‌ನ ಶೇ 20 ರಷ್ಟು ಸೀಟ್ಟುಗಳನ್ನು ಸರ್ಕಾರಿ ಕೋಟಾದ ಸೀಟುಗಳೆಂದು ಪರಿಗಣಿಸಿ ಬಿ.ಸಿ.ಎ. ಹಾಗೂ ಬಿ.ಎಸ್ಸಿ. (ಐಟಿ/ಕಂಪ್ಯೂಟರ್ ಸೈನ್ಸ್) ಪದವೀಧರರಿಗೆ ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸಿಗೆ ಹಂಚಿಕೆ ಮಾಡತಕ್ಕದ್ದು.

(3) ಲ್ಯಾಟರಲ್ ಎಂಟ್ರಿ ಮೂಲಕ 2ನೇ ವರ್ಷದ ಎಂ.ಸಿ.ಎ. ಕೋರ್ಸಿಗೆ ನೇರ ಪ್ರವೇಶ ಪಡೆಯಲಿಚ್ಚಿಸುವ ಬಿ.ಸಿ.ಎ. ಹಾಗೂ ಬಿ.ಎಸ್ಸಿ. (ಐಟಿ/ಕಂಪ್ಯೂಟರ್ ಸೈನ್ಸ್) ಅಭ್ಯರ್ಥಿಗಳು 10+2 ಅಥವಾ ಪದವಿಯಲ್ಲಿ ಗಣಿತ ವಿಷಯದೊಂದಿಗೆ ತೇರ್ಗಡೆ ಹೊಂದಿರತಕ್ಕದ್ದು.

(4) ಎಐಸಿಟಿಇ ನಿಯಮಾವಳಿಯಂತೆ ಅಭ್ಯರ್ಥಿಗಳು ಬಿ.ಸಿ.ಎ. ಹಾಗೂ ಬಿ.ಎಸ್ಸಿ. (ಐಟಿ/ಕಂಪ್ಯೂಟರ್ ಸೈನ್ಸ್) ಪದವಿಯಲ್ಲಿ ಕನಿಷ್ಠ ಶೇ. 50ರಷ್ಟು ಅಂಕ (ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಶೇ. 45 ಅಂಕ) ಪಡೆದಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ನಾಗಭೂಷಣ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ

**P.R. 525**

**SC-100**

## ಆರ್ಥಿಕ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಆಇ 23 ಕವಿಇ 2015 ಬೆಂಗಳೂರು, ದಿನಾಂಕ: 18.08.2015.**

ಸರ್ಕಾರಿ ಆದೇಶ ಸಂಖ್ಯೆ: ಆಇ 23 ಕವಿಇ 2015, ದಿನಾಂಕ: 17–08–2015ರಲ್ಲಿ ವಿಷಯ ಭಾಗದ 2ನೇ ಸಾಲಿನಲ್ಲಿ "ದಿನಾಂಕ: 01.04.2012 ರಿಂದ 31.03.2014ಕ್ಕೆ" ಎಂಬ ಪದಗಳಿಗೆ ಬದಲಾಗಿ "ದಿನಾಂಕ: 01–04–2010 ರಿಂದ 31—03–2012ಕ್ಕೆ" ಎಂದು ದಿನಾಂಕ: 17–08–2015ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

**P.R. 526**

**SC-100**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2014–15ನೇ ಸಾಲಿನಿಂದ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ವೈದ್ಯರುಗಳಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರ ಆದೇಶ ಸಂಖ್ಯೆ: ಆಕುಕ 252 ಹೆಚ್‌ಎಸ್‌ಹೆಚ್ 2014 ದಿನಾಂಕ: 25–06–2014, 10–07–2014, 24–07–2014 ಮತ್ತು 27–08–2014.
2. ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಅವರ ಪತ್ರ ಸಂಖ್ಯೆ: ಜೆಆರ್‌ಒ (ಎಂ)23/2014–15, ದಿನಾಂಕ: 17–03–2015 ಮತ್ತು 05–05–2015.
3. ಸೇವಾನಿರತ ಸ್ನಾತಕೋತ್ತರ ವಿದ್ಯಾರ್ಥಿಗಳ ಮನವಿ ದಿನಾಂಕ: 18–03–2015.

**ಪ್ರಸ್ತಾವನೆ :**

The Karnataka conduct of Entrance test for selection and admission to Post Graduate Medical and Dental Degree and Diploma Courses Rules 2006 ರ ರೀತ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ ದಂತ ಆರೋಗ್ಯಾಧಿಕಾರಿಗಳು ಸೇವಾನಿರತ ಕೋಟಾದಡಿ ಉನ್ನತ ವ್ಯಾಸಂಗ ಮಾಡಲು ನಿಯಮಗಳಲ್ಲಿ ಅವಕಾಶ ಕಲ್ಪಿಸಲಾಗಿದೆ. ಆ ಮೇರೆಗೆ ವೈದ್ಯಾಧಿಕಾರಿಗಳು ಪ್ರವೇಶ ಪರೀಕ್ಷೆಯಲ್ಲಿ ಗಳಿಸಿರುವ ಅಂಕ, ಅವರು ಸಲ್ಲಿಸಿರುವ ಗ್ರಾಮೀಣ ಸೇವೆ ಹಾಗೂ ಸೇವಾವಧಿಯ ಮೇಲೆ ಅಂಕಗಳನ್ನು ನೀಡಿ ತಯಾರಿಸಲ್ಪಟ್ಟ ಅರ್ಹತಾ ಪಟ್ಟಿಯ ಆಧಾರದ ಮೇಲೆ ಕೌನ್ಸಿಲಿಂಗ್‌ನಲ್ಲಿ ಭಾಗವಹಿಸಿ ತಜ್ಞತೆ ಮತ್ತು ಕಾಲೇಜುಗಳನ್ನು ಆಯ್ಕೆ ಮಾಡಿಕೊಂಡಿರುತ್ತಾರೆ.

ಆ ಮೇರೆಗೆ 2014–15ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿ ಮೇಲೆ ಕ್ರಮಾಂಕ(1) ರಲ್ಲಿ ಓದಲಾದಂತೆ ಸರ್ಕಾರದ ಆದೇಶಗಳನ್ನು ಹೊರಡಿಸಲಾಗಿತ್ತು.

ಈ ರೀತಿ ವ್ಯಾಸಂಗಕ್ಕೆ ನಿಯೋಜಿಸಲ್ಪಟ್ಟ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾಗಿರುವ ಬಗ್ಗೆ ಸಿ.ಟಿ.ಸಿ. ನಮೂನೆ–19 ಮತ್ತು 19ಎ ರಲ್ಲಿ ಕರಾರು ಬಂಧಪತ್ರ ಹಾಗೂ ಪೆನಾಲ್ಟಿ ಬಾಂಡ್ ಸಲ್ಲಿಸಿರುವುದರಿಂದ ಈ ವೈದ್ಯರುಗಳಿಗೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಅವರು ಮೇಲೆ ಕ್ರಮಾಂಕ(2) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಈ ಪೈಕಿ 5 ವರ್ಷಗಳ ಸರ್ಕಾರಿ ಸೇವೆಯನ್ನು ಪೂರೈಸದಿರುವ 15 ವೈದ್ಯಾಧಿಕಾರಿಗಳ ಪ್ರತಿನಿಯೋಜನಾ ಸೌಲಭ್ಯವನ್ನು ತಡೆಹಿಡಿದು, ಉಳಿದ 101 ವೈದ್ಯಾಧಿಕಾರಿಗಳಿಗೆ ಈಗಾಗಲೇ ಪ್ರತಿನಿಯೋಜನಾ ಸೌಲಭ್ಯ ಮಂಜೂರು ಮಾಡಿ ಆದೇಶಗಳನ್ನು ಹೊರಡಿಸಲಾಗಿದೆ. ಈ ಪೈಕಿ ಪ್ರತಿನಿಯೋಜನಾ ಸೌಲಭ್ಯ ತಡೆಹಿಡಿಯಲಾಗಿದ್ದ ಡಾ|| ರಾಕೇಶ್ ಉತ್ತಪ್ಪ ಎನ್. ಅವರು 5 ವರ್ಷಗಳ ಸೇವೆ ಪೂರೈಸಿರುವ ಅಂಶವನ್ನು ಪರಿಶೀಲಿಸಿ ಅವರಿಗೆ ಪ್ರತಿನಿಯೋಜನಾ ಸೌಲಭ್ಯ ಮಂಜೂರು ಮಾಡಿ ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗಿದೆ.

ಇನ್ನುಳಿದ 5 ವರ್ಷಗಳ ಸರ್ಕಾರಿ ಸೇವೆ ಪೂರೈಸದಿರುವ 14 ವೈದ್ಯಾಧಿಕಾರಿಗಳು ಮೇಲೆ ಕ್ರಮಾಂಕ (3)ರಲ್ಲಿ ಓದಲಾದಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿ, ಪ್ರತಿನಿಯೋಜನಾ ಸೌಲಭ್ಯ ಮಂಜೂರು ಮಾಡುವಂತೆ ಕೋರಿದ್ದ ಹಿನ್ನೆಲೆಯಲ್ಲಿ, ವಿಶೇಷ ಪ್ರಕರಣವೆಂದು ಪರಿಗಣಿಸಿ ನಿಯಮಗಳನ್ನು ಸಡಿಲಿಸಿ, ಸದರಿ ವೈದ್ಯಾಧಿಕಾರಿಗಳಿಗೂ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 161 ಹೆಚ್‌ಎಸ್‌ಹೆಚ್ 2015 ಬೆಂಗಳೂರು, ದಿನಾಂಕ: 24–08–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಲಾದ 14 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು 2014–15ನೇ ಸಾಲಿನಲ್ಲಿ ಪ್ರಥಮ ಬಾರಿಗೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿರುವುದರಿಂದ ವಿಶೇಷ ಪ್ರಕರಣವೆಂದು ಪರಿಗಣಿಸಿ, ಕರ್ನಾಟಕ ನಾಗರಿಕ ಸೇವಾ ನಿಯಮಗಳು 1958 ನಿಯಮ 61 ಅಪೆಂಡಿಕ್ಸ್ II–ಎ I ನ್ನು ಸಡಿಲಿಸಿ, ಅವರುಗಳಿಗೆ ವ್ಯಾಸಂಗ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಿದೆ.

ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾದ ದಿನಾಂಕದಿಂದ ಪ್ರತಿನಿಯೋಜನಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳಿಗೆ ವೇತನ ಮತ್ತು ಇತರೆ ಭತ್ಯೆಗಳನ್ನು ಬಟವಾಡೆ ಮಾಡುವ ಅಧಿಕಾರವನ್ನು ಈ ಕೆಳಕಂಡಂತೆ ನೀಡಿ ಆದೇಶಿಸಿದೆ.

(1) ಸ್ವಾಯತ್ತ ಸಂಸ್ಥೆ/ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ಸಂಬಂದಿಸಿದ ಜಿಲ್ಲೆಯ ಜಿಲ್ಲಾ ಶಸ್ತ್ರ ಚಿಕಿತ್ಸಕರು: ಒಂದು ವೇಳೆ ಜಿಲ್ಲಾ ಶಸ್ತ್ರ ಚಿಕಿತ್ಸಕರ ಹುದ್ದೆಯು ಯಾವುದೇ ಕಾರಣದಿಂದ ಖಾಲಿಯಿದ್ದಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ಆಕುಕ 34 ಹೆಚ್‌ಎಸ್‌ಹೆಚ್ 2012 ದಿನಾಂಕ: 18–01–2012 ರನ್ವಯ ಪ್ರತಿನಿಯೋಜನಾ ಸೌಲಭ್ಯವನ್ನು ವಿತರಿಸುವ ಅಧಿಕಾರವನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರಿಗೆ ನೀಡಲಾಗಿದೆ.

(2) ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು;

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 625 ವೆಚ್ಚ–5 2015 ದಿನಾಂಕ: 17–08–2008 ರಲ್ಲಿ ನೀಡಿರುವ ಸಹಮತದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಸೇವೆಗಳು)

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 161 ಹೆಚ್‌ಎಸ್‌ಹೆಚ್ 2015 ಬೆಂಗಳೂರು, ದಿನಾಂಕ: 24–08–2015ಕ್ಕೆ ಅನುಬಂಧ**

| ಕ್ರ ಸಂ. | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹೆಸರು ಮತ್ತು ವ್ಯಾಸಂಗ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ವೈದ್ಯಕೀಯ ಮಹಾವಿದ್ಯಾಲಯದ ಹೆಸರು | ವ್ಯಾಸಂಗದ ವಿಷಯ | ಸ್ನಾತಕೋತ್ತರ ವ್ಯಾಸಂಗಕ್ಕೆ ಹಾಜರಾದ ದಿನಾಂಕ |
|---|---|---|---|---|
| (1) | (2) | (3) | (4) | (5) |
| 1 | ಡಾ॥ ಶೈನಾಜ್ ಅಫ್ರೀನ್ ಪ್ರಾ.ಆ. ಕೇಂದ್ರ, ಮಡನ, ಸೇಡಂ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ | ಜೆ.ಜೆ.ಎಂ. ವೈದ್ಯಕೀಯ ಕಾಲೇಜು, ದಾವಣಗೆರೆ | ಡಿಜಿಓ | 02–07–2014 |
| 2 | ಡಾ॥ ಶ್ರೀರಂಜಿನಿ, ಪಿ.ಎಲ್. ಪ್ರಾ.ಆ ಕೇಂದ್ರ, ಸಾಸಿವೆಹಳ್ಳಿ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ | ಜೆ.ಜೆ.ಎಂ. ವೈದ್ಯಕೀಯ ಕಾಲೇಜು, ದಾವಣಗೆರೆ | ಎಂಎಸ್ (ಆಪ್ತೋ) | 10–07–2014 |
| 3 | ಡಾ॥ ದತ್ತಾತ್ರೇಯ ಪಿಸೆ ಪ್ರಾ. ಆ ಕೇಂದ್ರ, ಹರಪನಹಳ್ಳಿ ಜಿಗಟೇರಿ ತಾಲ್ಲೂಕು, ದಾವಣಗೆರೆ ಜಿಲ್ಲೆ | ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು | ಎಂ.ಡಿ (ಪೀಡಿಯಾ) | 02–07–2014 |
| 4 | ಡಾ॥ ಪಿ.ಬಿ. ಮಹ್ಮದ್ ಫಾರೂಖ್ ಪ್ರಾ.ಆ ಕೇಂದ್ರ, ಕಟ್ಟಿನಮನೆ, ಎನ್.ಆರ್. ಪುರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ | ಎಂಎಂಸಿ, ಮೈಸೂರು | ಎಂಎಸ್ (ಆರ್ಥೋ) | 30–06–2014 |
| 5 | ಡಾ॥ ಮಧು ಎನ್. ಪ್ರಾ.ಆ ಕೇಂದ್ರ, ಕಣಕಟ್ಟೆ, ಅರಸೀಕೆರೆ, ತಾಲ್ಲೂಕು, ಹಾಸನ ಜಿಲ್ಲೆ | ಆದಿಚಂಚನಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೆಳ್ಳೂರು, ಮಂಡ್ಯ | ಎಂಡಿ (ಅನಸ್ತೇಷಿಯಾ) | 21–07–2014 |
| 6 | ಡಾ॥ ಶಶಿಕಿರಣ್ ಬಿ.ಆರ್. ಪ್ರಾ.ಆ ಕೇಂದ್ರ, ಕುಪ್ಪೂರು, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ | ಶ್ಯಾಮನೂರು ಶಿವಶಂಕರಪ್ಪ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ದಾವಣಗೆರೆ | ಎಂಡಿ (ಆರ್.ಡಿ) | 01–07–2014 |
| 7 | ಡಾ॥ ಮಂಜುನಾಥ್ ಬಿ. ಪ್ರಾ.ಆ. ಕೇಂದ್ರ, ದೇವಸಮುದ್ರ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ | ಬಿಎಂಸಿಆರ್‌ಐ, ಬೆಂಗಳೂರು | ಎಂಎಸ್ (ಜಿಎಸ್) | 08–07–2014 |
| 8 | ಡಾ॥ ರವಿಕುಮಾರ್ ಎಸ್. ಪ್ರಾ.ಆ. ಕೇಂದ್ರ, ಜವಳಿ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ | ಫಾದರ್ ಮುಲ್ಲರ್ ವೈದ್ಯಕೀಯ ಕಾಲೇಜು, ಮಂಗಳೂರು | ಎಂಡಿ (ಅನಸ್ತೇಷಿಯಾ) | 09–07–2014 |
| 9 | ಡಾ॥ ಅನಿತ್‌ರಾಜ್ ಭಟ್ ವೈ. ಪ್ರಾ.ಆ. ಕೇಂದ್ರ, ಕುಂಭಾಶಿ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ | ಎಸ್‌ಡಿಎಂಎಂಸಿ. ಧಾರವಾಡ | ಎಂಡಿ (ಆರ್‌ಡಿ) | 30–06–2014 |
| 10 | ಡಾ॥ ಸೋಮಶೇಖರ್ ಎಂ.ಸಿ. ಸಾರ್ವಜನಿಕ ಆಸ್ಪತ್ರೆ, ಕಡೂರು, ಚಿಕ್ಕಮಗಳೂರು ಜಿಲ್ಲೆ | ನೆಫ್ರೋ ಯುರಾಲಜಿ ಸಂಸ್ಥೆ, ವಿಕ್ಟೋರಿಯಾ ಆಸ್ಪತ್ರೆ, ಆವರಣ, ಬೆಂಗಳೂರು | ಎಂಸಿಹೆಚ್ | 03–09–2014 |
| 11 | ಡಾ॥ ಬಸಿತ್ ಲತೀಫ್ ಕೆ. ಪ್ರಾ.ಆ. ಕೇಂದ್ರ, ಮಸ್ಕಿ, ಲಿಂಗಸೂಗೂರು ತಾಲ್ಲೂಕು, ರಾಯಚೂರು ಜಿಲ್ಲೆ | ಕಿಮ್ಸ್, ಹುಬ್ಬಳ್ಳಿ | ಎಂಡಿ (ಜಿಎಂ) | 01–07–2014 |
| 12 | ಡಾ॥ ಮಹಾಂತೇಶ ಚೆಟ್ಟಿ ಪ್ರಾ.ಆ. ಕೇಂದ್ರ ಯು. ಖಾನಾಪುರ, ರಾಯಚೂರು ಜಿಲ್ಲೆ | ಎಂಎಂಸಿ, ಮೈಸೂರು | ಎಂಡಿ (ಜಿಎಂ) | 01–07–2014 |
| 13 | ಡಾ॥ ಪಾಂಡುರಂಗ ದೊಡ್ಡಮನಿ, ಪ್ರಾ.ಆ. ಕೇಂದ್ರ, ಕರಗಾಂವ್, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ | ಅಲ್ ಅಮೀನ್ ಮೆಡಿಕಲ್ ಕಾಲೇಜು, ವಿಜಯಪುರ | ಎಂಡಿ (ಪೆಥಾಲಜಿ) | 01–07–2014 |
| 14 | ಡಾ॥ ಶರಣಬಸವ ಬಿ. ಪ್ರಾ. ಆ. ಕೇಂದ್ರ. ಇದಪ್ನೂರು ರಾಯಚೂರು ತಾಲ್ಲೂಕು/ಜಿಲ್ಲೆ | ವಿಮ್ಸ್ ಬಳ್ಳಾರಿ | ಎಂಡಿ (ಸ್ಕಿನ್ & ವಿಡಿ) | 01–07–2014 |

**ಬಿ.ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

**P.R. 527**

## ಆರ್ಥಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಕಡ್ಡಾಯ ಜೀವ ವಿಮಾ ಯೋಜನೆಯಡಿ ದಿನಾಂಕ: 01–04–2012 ರಿಂದ 31-03–2014ಕ್ಕೆ ಅಂತ್ಯಗೊಂಡ ದ್ವೈವಾರ್ಷಿಕ ಅವಧಿಗೆ ಮೌಲ್ಯಮಾಪನ ವರದಿಯ ಆಧಾರದ ಮೇಲೆ ಜೀವ ವಿಮಾ ಪಾಲಿಸಿಗಳ ಸ್ಥಿರಪಡಿಸಿದ ಮೊತ್ತದ ಮೇಲೆ ಬೋನಸ್ ನೀಡಲು ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕೆಜಿಐಡಿ/ಎವಿಜಿ/2010–12–ವಿ.ಮೌ.ಮಾ.ವ/156/2015–16, ದಿನಾಂಕ: 21–07–2015.

**ಪ್ರಸ್ತಾವನೆ :**

ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಇವರು ಮೇಲೆ ಓದಲಾದ ದಿನಾಂಕ: 21–07–2015ರ ಪತ್ರದಲ್ಲಿ 2010–2012ನೇ ದ್ವೈವಾರ್ಷಿಕ ಅವಧಿಯ ಕಡ್ಡಾಯ ಜೀವಾ ವಿಮಾ ಪಾಲಿಸಿಗಳ ಮೌಲ್ಯ ಮಾಪನ ಮಾಡಿದ ವಿಮಾ ಗಣಕರ ವರದಿಯನ್ನು ಕಳುಹಿಸಿ, ಅದನ್ನು ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ. ಮೌಲ್ಯಮಾಪನ ವರದಿಯ ಪ್ರಮುಖ ಅಂಶಗಳು ಕೆಳಕಂಡಂತಿದೆ.

| | | |
|---|---|---|
| 1. | ಚಾಲ್ತಿಯಲ್ಲಿದ್ದ ಪಾಲಿಸಿಗಳು | : ಸಂಖ್ಯೆ: 10,67,701 |
| 2. | ವಿಮಾ ಭರವಸೆ ಮೊತ್ತ | : ರೂ. 10143.39 ಕೋಟಿಗಳು |
| 3. | ಪ್ರತ್ಯಾವರ್ತಿ ಅಧಿಲಾಭಾಂಶ | : ರೂ. 4895.03 ಕೋಟಿಗಳು |
| 4. | ವಾರ್ಷಿಕ ಪ್ರೀಮಿಯಂ | : ರೂ. 484.12 ಕೋಟಿಗಳು |
| 5. | ಜೀವ ವಿಮಾ ನಿಧಿಯ ಶಿಲ್ಕು | : ರೂ. 5721.20 ಕೋಟಿಗಳು |
| 6. | ವಿಮಾ ವ್ಯವಹಾರದ ಮೇಲಿನ ನಿವ್ವಳ ಹೊಣೆಗಾರಿಕೆ | : ರೂ. 3941.00 ಕೋಟಿಗಳು |
| 7. | ಮೌಲ್ಯಮಾಪನದ ಹೆಚ್ಚುವರಿ (Surplus) | : ರೂ. 1780.20 ಕೋಟಿಗಳು |

ಆದುದರಿಂದ ದಿನಾಂಕ 31-03–2012 ರಂದು ಚಾಲ್ತಿಯಲ್ಲಿರುವ ಎಲ್ಲಾ ಪಾಲಿಸಿಗಳಿಗೆ ಪ್ರತಿ ಸಾವಿರ ವಿಮಾ ಮೊತ್ತಕ್ಕೆ ಪ್ರತಿ ವರ್ಷಕ್ಕೆ ರೂ. 90/– ರಂತೆ ಪ್ರತ್ಯಾವರ್ತಿ ಲಾಭಾಂಶವನ್ನು ಒಟ್ಟು ರೂ. 912.90 ಕೋಟಿಗಳಲ್ಲಿ ವಿತರಣೆ ಮಾಡಲು ಹಾಗೂ ಉಳಿದ 867.30 ಕೋಟಿ ಮೊತ್ತವನ್ನು ಮುಂದಿನ ಮೌಲ್ಯಮಾಪನ ಅವಧಿಗೆ ಕೊಂಡೊಯ್ಯಲು ವಿಮಾ ಗಣಕರು ಶಿಫಾರಸ್ಸು ಮಾಡಿರುತ್ತಾರೆ.

ಮುಂದುವರೆದು, ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರು ಮೇಲಿನ ಅಂಶಗಳ ಆಧಾರದ ಮೇಲೆ ದಿನಾಂಕ: 31-03–2012 ರಂದು ಚಾಲ್ತಿಯಲ್ಲಿದ್ದ ಪಾಲಿಸಿಗಳ ಮೇಲೆ ವಿಮಾ ಮೊತ್ತದ ಪ್ರತಿ 1000/– ರೂ. ಗಳಿಗೆ ವಾರ್ಷಿಕ 90/– ರೂ. ದರದಲ್ಲಿ ಬೋನಸ್ ನೀಡುವುದರ ಜೊತೆಗೆ ದಿನಾಂಕ: 01-04–2012 ರಿಂದ 31-03–2014 ಅವಧಿಯಲ್ಲಿ ಅವಧಿಪೂರ್ಣ, ಮರಣಜನ್ಯ, ವಿಮಾತ್ಯಾಗ ಆದ ಪಾಲಿಸಿಗಳಿಗೂ ಸಹ ಮುಂದಿನ ಮೌಲ್ಯಮಾಪನ ದಿನಾಂಕದವರೆಗೆ ಪ್ರತಿ 1000/– ರೂ. ಗಳಿಗೆ ವಾರ್ಷಿಕ 90/– ರೂ. ಮಧ್ಯಂತರ ಲಾಭಾಂಶವನ್ನು ನೀಡಲು ವಿಮಾ ಗಣಕರು ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸಿ, ಈ ಕೆಳಕಂಡ ಪ್ರಸ್ತಾವನೆಗಳಿಗೆ ಸರ್ಕಾರದ ಆದೇಶವನ್ನು ನೀಡಬೇಕೆಂದು ನಿರ್ದೇಶಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

1) ದಿನಾಂಕ: 01–04–2010 ರಿಂದ 31–03–2012ರ ದ್ವೈವಾರ್ಷಿಕ ಮೌಲ್ಯಮಾಪನ ಅವಧಿಯಲ್ಲಿ ಚಾಲ್ತಿಯಲ್ಲಿದ್ದ ಎಲ್ಲಾ ಪಾಲಿಸಿಗಳಿಗೆ ಹಾಗೂ ಚಾಲ್ತಿಯಲ್ಲಿದ್ದ ಪ್ರತಿ ತಿಂಗಳ ಅವಧಿಯನ್ನು ಒಳಗೊಂಡಂತೆ ಪಾಲಿಸಿಗಳ ಸ್ಥಿರಪಡಿಸಿದ ವಿಮಾ ಮೊತ್ತದ ಮೇಲೆ ಪ್ರತಿ ಸಾವಿರ ರೂ.ಗಳಿಗೆ ಪ್ರತಿ ವರ್ಷಕ್ಕೆ ರೂ. 90/– ರಂತೆ ಸರಳ ಪ್ರತ್ಯಾವರ್ತಿ ಲಾಭಾಂಶ (ಸಿಂಪಲ್ ರಿವರ್ಷನರಿ ಬೋನಸ್) ಘೋಷಿಸುವುದು.

2) ಅವಧಿಪೂರ್ಣ, ಮರಣಜನ್ಯ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ದಿನಾಂಕ: 01–04–2012 ರಿಂದ 31–03–2014ರ ಅವಧಿಯಲ್ಲಿ ಹೊರ ಹೋಗಿರುವ ವಿಮಾ ಪಾಲಿಸಿಗಳಿಗೆ ಪ್ರತಿ ಸಾವಿರ ರೂ. ವಿಮಾ ಮೊತ್ತಕ್ಕೆ ಪ್ರತಿ ವರ್ಷಕ್ಕೆ ರೂ. 90/– ರಂತೆ ಮಧ್ಯಂತರ ಲಾಭಾಂಶವನ್ನು (ಇಂಟೀರಿಯಮ್ ಬೋನಸ್) ಘೋಷಿಸುವುದು.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 23 ಕವಿಇ 2015, ಬೆಂಗಳೂರು, ದಿನಾಂಕ: 17–08–2015.**

2010–2012ರ ದ್ವೈವಾರ್ಷಿಕ ಅವಧಿಯ ವಿಮಾ ಗಣನಾ ವರದಿ ಹಾಗೂ ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರ ಶಿಫಾರಸ್ಸನ್ನು ವಿವರವಾಗಿ ಪರಿಶೀಲಿಸಿ ಕೆಳಕಂಡ ಅಂಶಗಳಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

i) ದಿನಾಂಕ: 31–03–2012ರಂದು ಚಾಲ್ತಿಯಲ್ಲಿದ್ದ ಎಲ್ಲಾ ಪಾಲಿಸಿಗಳಿಗೆ 2010–2012ರ ದ್ವೈವಾರ್ಷಿಕ ಅವಧಿಯಲ್ಲಿ ವಿಮಾ ಮೊತ್ತದ ಪ್ರತಿ 1000/– ರೂ. ಗಳಿಗೆ ವಾರ್ಷಿಕ 90/– ರೂ. ಬೋನಸ್ ನೀಡುವುದು; ಮತ್ತು

ii) ದಿನಾಂಕ: 01–04–2012 ರಿಂದ 31–03–2014ರ ಅವಧಿಯಲ್ಲಿ ಅವಧಿಪೂರ್ಣ, ಮರಣ ಜನ್ಯ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ಹೊರಹೋಗಿರುವ ವಿಮಾ ಪಾಲಿಸಿಗಳಿಗೆ ಮುಂದಿನ ಮೌಲ್ಯಮಾಪನ ದಿನಾಂಕದವರೆಗೆ ಪ್ರತಿ ರೂ.1000/–ಕ್ಕೆ ವಾರ್ಷಿಕ 90/– ರೂ. ಮಧ್ಯಂತರ ಬೋನಸನ್ನು ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

**P.R. 509**
**SC: 100**

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಣಿ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಸಿಒ/79/ಸಿಎಲ್ಎಸ್/2015, ಬೆಂಗಳೂರು. ದಿನಾಂಕ: 19–03–2015.

2) ಈ ಕಛೇರಿ ಸಮಸಂಖ್ಯೆ ಆದೇಶದ ದಿನಾಂಕ: 02–06–2015 ಮತ್ತು 27–06–2015.

**ಪ್ರಸ್ತಾವನೆ :**

2015–16ನೇ ಸಾಲಿನ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಾವಣೆಗೆ ಮೇಲೆ ಓದಲಾದ ಸರ್ಕಾರಿ ಆದೇಶದಂತೆ ಜಾರಿಗೊಳಿಸಿ ನೋಂದಣಿ ದಿನಾಂಕವನ್ನು ವಿಸ್ತರಿಸಿದ್ದು, ವಿಸ್ತರಿಸಿದ್ದ ಅವಧಿ 31–07–2015ಕ್ಕೆ ಕೊನೆಗೊಳ್ಳುತ್ತದೆ. ದಿನಾಂಕ: 17–07–2015ರವರೆಗೆ ಈ ಯೋಜನೆಯಲ್ಲಿ ಕೇವಲ 19,41,427 ಸದಸ್ಯರು ಮಾತ್ರ ನೋಂದಣಿಯಾಗಿದ್ದು, ಕಳೆದ ವರ್ಷಕ್ಕೆ ಹೋಲಿಸಿದ್ದಲ್ಲಿ ಶೇಕಡಾ 50 ಮಾತ್ರ ನೋಂದಣಿ ಆಗಿರುತ್ತಾರೆ. ಗ್ರಾಮ ಪಂಚಾಯಿತಿ ಚುನಾವಣೆ ಮತ್ತು ವಿಧಾನ ಮಂಡಲ ಅಧಿವೇಶನ ಪ್ರಯುಕ್ತ ಇಲಾಖಾಧಿಕಾರಿಗಳು ಯಶಸ್ವಿನಿ ಯೋಜನೆಯ ನೋಂದಣಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲ ಹಾಗೂ ಪ್ರಸ್ತುತ ವರ್ಷದ ಆಯವ್ಯಯದಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರಿಗಾಗಿ ಹೆಚ್ಚಿನ ಮೊತ್ತವನ್ನು ಮೀಸಲಿರಿಸಿರುವುದರಿಂದ, ಪರಿಶಿಷ್ಟ ಜಾತಿ / ಪಂಗಡದ ಸದಸ್ಯರನ್ನೊಳಗೊಂಡಂತೆ ಇತರೆ ಹಿಂದುಳಿದ ವರ್ಗದ ಜನರನ್ನು ಸಹ ಹೆಚ್ಚಿನ ಸಂಖ್ಯೆಯಲ್ಲಿ ನೋಂದಾಯಿಸಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಗ್ರಾಮೀಣ ಯಾಶಸ್ವಿನಿ ಯೋಜನೆಯಡಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೋಂದಣಿ ಮಾಡುವ ದೃಷ್ಟಿಯಿಂದ ನೋಂದಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯಕವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/79/ಸಿಎಲ್ಎಸ್/2015, ಬೆಂಗಳೂರು, ದಿನಾಂಕ: 30–07–2015**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಣಿ ಅವಧಿಯನ್ನು ದಿನಾಂಕ: 31–08–2015ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ

**P.R. 510**
**SC: 250**

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಣಿ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಒ/80/ಸಿಎಲ್ಎಸ್/2015, ಬೆಂಗಳೂರು, ದಿನಾಂಕ: 19–03–2015.

2. ಈ ಕಛೇರಿ ಸಮಸಂಖ್ಯೆ ಆದೇಶದ ದಿನಾಂಕ: 02–06–2015 ಮತ್ತು 27–06–2015.

**ಪ್ರಸ್ತಾವನೆ :**

2015–16ನೇ ಸಾಲಿನ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಾವಣೆಗೆ ಮೇಲೆ ಓದಲಾದ ಸರ್ಕಾರಿ ಆದೇಶದಂತೆ ಜಾರಿಗೊಳಿಸಿ ನೋಂದಣಿ ದಿನಾಂಕವನ್ನು ವಿಸ್ತರಿಸಿದ್ದು, ವಿಸ್ತರಿಸಿದ ಅವಧಿ ದಿನಾಂಕ: 31–07–2015ಕ್ಕೆ ಕೊನೆಗೊಳ್ಳುತ್ತದೆ. ದಿನಾಂಕ: 17–07–2015ರವರೆಗೆ ಈ ಯೋಜನೆಯಲ್ಲಿ ಕೇವಲ 81,444 ಸದಸ್ಯರು ಮಾತ್ರ ನೋಂದಣಿಯಾಗಿರುತ್ತಾರೆ. ಇದಲ್ಲದೆ ನಗರ ಯಶಸ್ವಿನಿ ಯೋಜನೆಯಡಿ ನೋಂದಾಯಿಸಲ್ಪಡುವ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ನೋಂದಣಿ ಶುಲ್ಕದಲ್ಲಿ ಸಹಾಯಧನವನ್ನು ರೂ. 200/– ರಿಂದ ರೂ. 600/–ಕ್ಕೆ ಹೆಚ್ಚಿಸಿ ದಿನಾಂಕ: 16–07–2015ರಂದು ಆದೇಶ ಹೊರಡಿಸಿರುವುದರಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ನೊಂದಣಿ ಶುಲ್ಕ ರೂ. 510/– ರಿಂದ ರೂ. 110/– ಕ್ಕೆ ಕಡಿಮೆಯಾಗಿರುತ್ತದೆ. ನೋಂದಣಿ ಶುಲ್ಕದಲ್ಲಿ ಕಡಿಮೆಯಾಗಿರುವ ಅಂಶವನ್ನು ನಗರ ಸಹಕಾರಿ ಸಂಘಗಳಿಗೆ ಮತ್ತು ಸದಸ್ಯರಿಗೆ

ಮನವರಿಕೆ ಮಾಡಲು ಸಮಯ ಬೇಕಾಗುತ್ತದೆ ಮತ್ತು ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೋಂದಣಿ ಮಾಡುವ ದೃಷ್ಟಿಯಿಂದ ನೋಂದಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ/80/ಸಿಎಲ್ಎಸ್/2015 ಬೆಂಗಳೂರು, ದಿನಾಂಕ : 30-07-2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಣಿ ಅವಧಿಯನ್ನು ದಿನಾಂಕ: 31-08-2015ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 511

SC: 250

**ಎಂ ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ

ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** 2014-15ನೇ ಸಾಲಿನಲ್ಲಿ ಕೃಷಿ ಸಾಲಗಳ ಮೇಲಿನ ಬಡ್ಡಿ ರಿಯಾಯಿತಿ ಯೋಜನೆಯಡಿಯಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು ಬ್ಯಾಂಕಿನ ಮೂಲಕ ನೀಡುವ ಮಧ್ಯಮಾವಧಿ ಕೃಷಿ ಸಾಲಗಳಿಗೆ ಬಡ್ಡಿ ಸಹಾಯಧನ ದರ ನಿಗಧಿಪಡಿಸುವ ಕುರಿತು ಆದೇಶ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಒ 207 ಸಿಎಲ್ಎಸ್ 2014, ದಿನಾಂಕ: 08-08-2014.
2) ಸರ್ಕಾರದ ಆದೇಶ ಸಂಖ್ಯೆ: ಸಿಒ 200 ಸಿಎಲ್ಎಸ್ 2014, ದಿನಾಂಕ: 18-06-2014.
3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ಸಿಎಬಿ-1/9/2014-15, ದಿನಾಂಕ: 26-05-2015.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೇಕಡಾ 3 ರ ಬಡ್ಡಿ ದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ/ಕೃಷಿ ಸಂಬಂಧಿತ ಸಾಲಗಳನ್ನು ನೀಡುವ ಯೋಜನೆಯನ್ನು 2014-15ನೇ ಸಾಲಿಗೆ ಮುಂದುವರೆಸಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2013-14 ನೇ ಸಾಲಿನಲ್ಲಿ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ರೈತರಿಗೆ ವಿತರಿಸಿದ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳಿಗೆ ಶೇ. 9.50 ಹಾಗೂ ಡಿಸಿಸಿ ಬ್ಯಾಂಕ್‌ಗಳ ಶಾಖೆಗಳ ಮೂಲಕ ನೇರವಾಗಿ ವಿತರಿಸಿದ ಸಾಲಗಳಿಗೆ ಶೇ.8.50 ಬಡ್ಡಿ ಸಹಾಯಧನವನ್ನು ನಿಗಧಿಪಡಿಸಲಾಗಿರುತ್ತದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 26-05-2015 ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2014-15 ನೇ ಸಾಲಿನಲ್ಲಿ ವಿತರಿಸಿದ ಸಾಲಗಳಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳಿಗೆ ಕ್ರಮವಾಗಿ ಶೇ.10 ಹಾಗೂ ಶೇ.9 ರ ದರ ನಿಗಧಿಪಡಿಸಿ ಮತ್ತು ರೈತರಿಂದ ವಸೂಲಿ ಮಾಡಿದ ಶೇ.3 ರ ಬಡ್ಡಿದರದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ತಮ್ಮ ಮಾರ್ಜಿನ್ ಆಗಿ ಶೇ.2.25ನ್ನು ಉಳಿಸಿಕೊಂಡು ಶೇ.0.75 ಮಾರ್ಜಿನ್‌ನ್ನು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳಿಗೆ ವರ್ಗಾಯಿಸಿ ಆದೇಶ ಹೊರಡಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 208 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 12-08-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2014-15ನೇ ಸಾಲಿನಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ರೈತರಿಗೆ ವಿತರಿಸಿದ ಮಧ್ಯಮಾವಧಿ ಸಾಲಗಳಿಗೆ ಕ್ರಮವಾಗಿ ಶೇ.9.5 ಮತ್ತು ಶೇ. 8.5 ರ ದರದಲ್ಲಿ ಬಡ್ಡಿ ಸಹಾಯಧನವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ.

ರೈತರಿಂದ ವಸೂಲಿ ಮಾಡಿದ ಶೇ.3ರ ಬಡ್ಡಿದರವನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು ಕ್ರಮವಾಗಿ ಶೇ.2.25 : 0.75 ಅನುಪಾತದಲ್ಲಿ ಮಾರ್ಜಿನ್ ಮೊತ್ತವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 231 ವೆಚ್ಚ-2/2015, ದಿನಾಂಕ: 29-07-2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 512

SC : 100

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಸಹಕಾರ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ :** 2015–16ನೇ ಸಾಲಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಸದಸ್ಯರಾಗಿಲ್ಲದಿರುವ ರಾಜ್ಯದ ಬಿ.ಪಿ.ಎಲ್. ಕುಟುಂಬದ ಒಬ್ಬ ಸದಸ್ಯರನ್ನು ನೋಂದಾಯಿಸುವ ಯೋಜನೆ ಒಳಗೊಂಡಂತೆ ಪ.ಜಾ./ಪ.ಪಂ./ಅಲ್ಪಸಂಖ್ಯಾತ/ ಮಹಿಳಾ ಮತ್ತು ಅಂಗವಿಕಲರನ್ನು ವಿವಿಧ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಒ 209 ಸಿಎಲ್ಎಸ್ 2013 (ಭಾಗ–1), ದಿನಾಂಕ: 16–11–2013.
2) ಸರ್ಕಾರದ ಆದೇಶ ಸಂಖ್ಯೆ: ಸಇ 93 ಸಂಮಾಸ 2014, ದಿನಾಂಕ: 16–07–2014.
3) ಸರ್ಕಾರದ ಆದೇಶ ಸಂಖ್ಯೆ: ಸಇ 94 ಸಂಮಾಸ 2014, ದಿನಾಂಕ: 16–07–2014.
4) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಓಟಿಎಸ್–1/5/ಪಿಎಲ್ಎನ್/2015–2016, ದಿನಾಂಕ: 16–04–2015.
5) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಓಟಿಎಸ್–1/5/ಪಿಎಲ್ಎನ್/2015–2016, ದಿನಾಂಕ: 30–04–2015.

**ಪ್ರಸ್ತಾವನೆ :**

ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಸದಸ್ಯರಾಗಿಲ್ಲದಿರುವ ರಾಜ್ಯದ ಪ್ರತಿ ಬಿ.ಪಿ.ಎಲ್. ಕುಟುಂಬದ ಒಬ್ಬ ಸದಸ್ಯರನ್ನು ಮುಂದಿನ ಮೂರು ವರ್ಷಗಳಲ್ಲಿ ಸಹಕಾರ ಸಂಘದಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಷೇರುಧನದ ಮೊತ್ತವನ್ನು ಸರ್ಕಾರದಿಂದ ಭರಿಸಲಾಗುವುದೆಂದು ಆಯವ್ಯಯ ಭಾಷಣದಲ್ಲಿ ಘೋಷಿಸಲಾಗಿರುತ್ತದೆ. ಈಗಾಗಲೇ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತ, ಮಹಿಳಾ ಮತ್ತು ಅಂಗವಿಕಲರಿಗೆ ವಿವಿಧ ಸಹಕಾರಿ ಸಂಸ್ಥೆಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸುವ ಯೋಜನೆ ಇದ್ದು, ಇದನ್ನು ಒಗ್ಗೂಡಿಸಿ ಇದರೊಂದಿಗೆ ಬಿ.ಪಿ.ಎಲ್. ಕುಟುಂಬದ ಒಬ್ಬ ಸದಸ್ಯರನ್ನು PACSಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಒಂದು ಷೇರುಧನದ ಮೊತ್ತವನ್ನು ಸರ್ಕಾರದಿಂದ ಭರಿಸಲು 2015–16ನೇ ಸಾಲಿನ ಆಯವ್ಯಯದಲ್ಲಿ `32.00 ಕೋಟಿಗಳ ಅವಕಾಶವನ್ನು ಕಲ್ಪಿಸಲಾಗಿರುತ್ತದೆ.

ಮೇಲೆ ಓದಲಾದ (1) ರ ಆದೇಶದಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳ ಸದಸ್ಯರನ್ನು ರಾಜ್ಯದ ವಿವಿಧ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಸಹಾಯಧನ ನೀಡುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಎಲ್ಲಾ ವಿಧದ ಸಹಕಾರ ಸಂಘಗಳಲ್ಲಿ ಮಹಿಳೆಯರನ್ನು ನೋಂದಾಯಿಸಲು 'ಪ್ರಿಯದರ್ಶಿನಿ' ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ ಓದಲಾದ (3)ರ ಆದೇಶದಲ್ಲಿ ವಿಕಲಚೇತನರಿಗಾಗಿ ಪ್ರತ್ಯೇಕ ಸಹಕಾರ ಸಂಘಗಳನ್ನು ಸ್ಥಾಪಿಸಲು ಹಾಗೂ ವಿವಿಧ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಿ ಪ್ರೋತ್ಸಾಹಿಸಲು 'ಆಶಾಕಿರಣ' ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.

ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ (4) ಮತ್ತು (5) ರ ಪತ್ರಗಳಲ್ಲಿ ಈಗಾಗಲೇ ಇರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತ, ಮಹಿಳಾ ಮತ್ತು ಅಂಗವಿಕಲರಿಗೆ ವಿವಿಧ ಸಹಕಾರಿ ಸಂಸ್ಥೆಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸುವ ಯೋಜನೆಗಳನ್ನು ಒಗ್ಗೂಡಿಸಿ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಸದಸ್ಯರಾಗಿಲ್ಲದಿರುವ ರಾಜ್ಯದ ಪ್ರತಿ ಬಿ.ಪಿ.ಎಲ್. ಕುಟುಂಬದ ಒಬ್ಬ ಸದಸ್ಯರನ್ನು ಮುಂದಿನ ಮೂರು ವರ್ಷಗಳಲ್ಲಿ ಸಹಕಾರ ಸಂಘದಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಹೊಸ ಯೋಜನೆಯಡಿ ಷೇರುಧನದ ಮೊತ್ತವನ್ನು ಸರ್ಕಾರದಿಂದ ಭರಿಸಲು ಘೋಷಿಸಿದ್ದು, ಇದಕ್ಕಾಗಿ 2015–16ನೇ ಸಾಲಿನಲ್ಲಿ `32.00 ಕೋಟಿಗಳನ್ನು ಒದಗಿಸಿರುವುದರಿಂದ, ಯೋಜನೆ ಅನುಷ್ಠಾನಕ್ಕಾಗಿ ಮಾನದಂಡಗಳನ್ನು ತಯಾರಿಸಿ ಆಡಳಿತಾತ್ಮಕ ಆದೇಶ ಹೊರಡಿಸಬೇಕೆಂದು ಕೋರಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ 154 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 29–06–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈಗಾಗಲೇ ಇರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತ, ಮಹಿಳಾ ಮತ್ತು ಅಂಗವಿಕಲರಿಗೆ ವಿವಿಧ ಸಹಕಾರಿ ಸಂಸ್ಥೆಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸುವ ಯೋಜನೆಗಳನ್ನು ಒಗ್ಗೂಡಿಸಿ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಸದಸ್ಯರಾಗಿಲ್ಲದಿರುವ ರಾಜ್ಯದ ಪ್ರತಿ ಬಿ.ಪಿ.ಎಲ್. ಕುಟುಂಬದ ಒಬ್ಬ ಸದಸ್ಯರನ್ನು ಮುಂದಿನ ಮೂರು ವರ್ಷಗಳಲ್ಲಿ ಸಹಕಾರ ಸಂಘದಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಷೇರುಧನದ ಮೊತ್ತವನ್ನು ಸರ್ಕಾರದಿಂದ ಭರಿಸಲಾಗುವುದರಿಂದ ಇದಕ್ಕಾಗಿ ಆಯವ್ಯಯ "ಲೆಕ್ಕ ಶೀರ್ಷಿಕೆ 2425–00–108–058" ರಡಿ ಒದಗಿಸಲಾಗಿರುವ `3,200.00 (ಮೂರು ಸಾವಿರದ ಇನ್ನೂರು ಲಕ್ಷ ರೂಪಾಯಿಗಳು ಮಾತ್ರ) ಲಕ್ಷಗಳಲ್ಲಿ ಯೋಜನೆಯನ್ನು ಸಹಕಾರ ಸಂಘಗಳ ನಿಬಂಧಕರು ಅನುಷ್ಠಾನಗೊಳಿಸಲು ಈ ಕೆಳಕಂಡಂತೆ ವಿಂಗಡಿಸಿ ಷರತ್ತು/ಮಾನದಂಡಗಳನ್ವಯ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| ಲೆಕ್ಕಶೀರ್ಷಿಕೆ : 2425–00–108–058 | ಮೊತ್ತ ಲಕ್ಷಗಳಲ್ಲಿ |
|---|---|
| 106–ಸಹಾಯಧನ | 2720.00 |
| 422–ಪರಿಶಿಷ್ಟ ಜಾತಿ ಉಪಯೋಜನೆ | 320.00 |
| 423–ಗಿರಿಜನ ಉಪಯೋಜನೆ | 160.00 |
| **ಒಟ್ಟು ಮೊತ್ತ** | **3200.00** |

ಈ ಆದೇಶವನ್ನು ಯೋಜನಾ ಇಲಾಖೆ ಟಿಪ್ಪಣಿ ಸಂಖ್ಯೆ : ಪಿಡಿ 34 ಎಫ್‌ಆರ್‌ಓ 2015, ದಿನಾಂಕ: 28–05–2015 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ187 ಇಎಕ್ಸ್‌ಪಿ–2/2014, ದಿನಾಂಕ:16–06–2015ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಸಿಓ 154 ಸಿಎಲ್‌ಎಸ್ 2015, ದಿನಾಂಕ: 29–06–2015.**

**ಅನುಬಂಧ**

**ಈಗಾಗಲೇ ಜಾರಿಯಲ್ಲಿರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತ, ಮಹಿಳಾ ಮತ್ತು ಅಂಗವಿಕಲರ ನೋಂದಣಿ ಆದೇಶದ ಜೊತೆಗೆ ಸಹಕಾರ ಸಂಘಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವ (ಬಿಪಿಎಲ್ ಕಾರ್ಡ್‌ದಾರರು) ಜನರನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿಸುವ ಯೋಜನೆ ಕುರಿತು ಷರತ್ತು / ನಿಬಂಧನೆಗಳು**

2015–16ನೇ ಸಾಲಿನ ಆಯವ್ಯಯ ಕಂಡಿಕೆ 91ರಲ್ಲಿ ಘೋಷಣೆ ಮಾಡಿರುವಂತೆ, ಈ ಆರ್ಥಿಕ ವರ್ಷದಲ್ಲಿ PACS ಗಳಲ್ಲಿ ಸದಸ್ಯರಾಗಿಲ್ಲದಿರುವ ರಾಜ್ಯದ ಪ್ರತಿ ಬಿ.ಪಿ.ಎಲ್. ಕುಟುಂಬದ ಒಬ್ಬ ಸದಸ್ಯರನ್ನು (ಬಿಪಿಎಲ್ ಕಾರ್ಡ್‌ದಾರರು) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಸಹಾಯಧನ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಆಯಾ ಸಂಘದ ಉಪವಿಧಿಗಳಂತೆ ಒಂದು ಷೇರಿನ ಮೌಲ್ಯ ಅಥವಾ `500/– ಯಾವುದು ಕಡಿಮೆಯೋ ಅದನ್ನು ಪರಿಗಣಿಸಿ ಸಹಾಯಧನ ರೂಪದಲ್ಲಿ ಸಂಬಂಧಿಸಿದ ಸಂಘಗಳಿಗೆ ಮಂಜೂರು ಮಾಡಲು ಅವಕಾಶವನ್ನು ಕಲ್ಪಿಸಲಾಗಿದೆ.

ಈ ಯೋಜನೆಯಡಿ ಇಲಾಖೆಗೆ ಒದಗಿಸಲಾಗುವ ಅನುದಾನದಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ನಿಗಧಿಪಡಿಸುವ ಆಯವ್ಯಯಕ್ಕನುಗುಣವಾಗಿ ಆರ್ಥಿಕ ಮತ್ತು ಭೌತಿಕ ಗುರಿಯನ್ನು ನಿಗಧಿ ಪಡಿಸಲಾಗುವುದು.

ಈ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಪ್ರತಿ ಬಿ.ಪಿ.ಎಲ್. ಕುಟುಂಬದಲ್ಲಿ ಒಬ್ಬ ಸದಸ್ಯನಿಗೆ ನೀಡುವ ಸಹಾಯಧನವನ್ನು ಆಯಾ ಸಂಘದ ಒಂದು ಷೇರಿನ ಮೌಲ್ಯ ಅಥವಾ ರೂ. 500/– ಯಾವುದು ಕಡಿಮೆಯೋ ಅದನ್ನು ಪರಿಗಣಿಸಿ ಪ್ರಸ್ತಾವೆ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು. ಸಹಕಾರ ಸಂಘದ ಒಂದು ಷೇರಿನ ಮೌಲ್ಯವನ್ನು ಪರಿಗಣಿಸಿ ಪ್ರತ್ಯೇಕವಾಗಿ ಪ್ರಸ್ತಾವೆ ಸಲ್ಲಿಸಬೇಕು. ಪ್ರಸ್ತಾವನೆಗಳನ್ನು ಸಲ್ಲಿಸುವ ಮೊದಲು ಪ್ರಸ್ತಾವನೆ ಪಡೆಯಬೇಕೆಂದಿರುವ ಅಂತಹ ಸಹಕಾರ ಸಂಘಗಳಿಗೆ ಜಿಲ್ಲೆಯ ಕ್ಷೇತ್ರಾಧಿಕಾರಿಗಳು ಸಂಘಕ್ಕೆ ಖುದ್ದು ಭೇಟಿ ನೀಡಿ, ಸಂಘದ ಕಾರ್ಯ ವೈಖರಿಯ ಬಗ್ಗೆ ಪರಿಶೀಲಿಸಿ ಕಾರ್ಯನಿರ್ವಹಿಸುತ್ತಿರುವಂತಹ ಅರ್ಹ ಸಹಕಾರ ಸಂಘಗಳ ಪ್ರಸ್ತಾವನೆಯನ್ನು ಮಾತ್ರ ಸಲ್ಲಿಸಬೇಕು. ಅರ್ಹವಿಲ್ಲದ ಸಹಕಾರ ಸಂಘಗಳನ್ನು ಶಿಫಾರಸ್ಸು ಮಾಡಿದಲ್ಲಿ ಅಂತಹ ಅಧಿಕಾರಿ / ಸಿಬ್ಬಂದಿಗಳ ವಿರುದ್ಧ ನಿಯಮಾನುಸಾರ ಕ್ರಮವಹಿಸಲಾಗುವುದು.

ಸದರಿ ಯೋಜನೆಯನ್ನು ಅನುಷ್ಠಾನ ಮಾಡುವ ನಿಟ್ಟಿನಲ್ಲಿ ಈ ಕೆಳಕಂಡಂತೆ ನೀಡಿರುವ ಸೂಚನೆಗಳನ್ನು ಅನುಸರಿಸಿ, **ಲಗತ್ತಿಸಿರುವ ನಿಗದಿತ ನಮೂನೆ 1 (ಫಲಾನುಭವಿಗಳ ಪಟ್ಟಿ) ಮತ್ತು 2 (abstract) ರ ಮಾಹಿತಿಯೊಂದಿಗೆ ಬಡತನ ರೇಖೆಗಿಂತ ಕೆಳಗಿರುವ (ಬಿಪಿಎಲ್ ಕಾರ್ಡ್‌ದಾರರಿಗೆ) ಸಂಬಂಧಿಸಿದಂತೆ ಪ್ರತ್ಯೇಕ ಪ್ರಸ್ತಾವನೆಗಳನ್ನು ಸಿದ್ಧಪಡಿಸತಕ್ಕದ್ದು ಹಾಗೂ ಈ ಯೋಜನೆಯಡಿ ಪ್ರಸ್ತಾವನೆ ಸಲ್ಲಿಸುವಾಗ ಶೇಕಡ 33 ರಷ್ಟು ಮಹಿಳೆಯರು ಹಾಗೂ ಶೇಕಡ 3 ರಷ್ಟು ವಿಕಲಚೇತನರಿಗೆ ಅವಕಾಶ ಕಲ್ಪಿಸುವುದು.** ಸಹಾಯಧನ ಮಂಜೂರು ಮಾಡಲು ಶಿಫಾರಸ್ಸು ಮಾಡುವ ಸಂಘವು, ಈ ಯೋಜನೆಯಡಿ ನಿಗಧಿಪಡಿಸಿರುವ ಷರತ್ತು, ಮಾರ್ಗಸೂಚಿಗಳು ಮತ್ತು ಮಾಹಿತಿಗಳನ್ನು ಪೂರ್ಣವಾಗಿ ಪೂರೈಸಿರಬೇಕು. ಈ ಪ್ರಸ್ತಾವಗಳನ್ನು ನಿಗಧಿಪಡಿಸಲಾದ ಲೆಕ್ಕಶೀರ್ಷಿಕೆಯಡಿಯಲ್ಲಿ ಸಹಾಯಧನದ ರೂಪದಲ್ಲಿ ಮಂಜೂರು ಮಾಡಲಾಗುವುದು. ಮಂಜೂರಾತಿ ನಂತರ ಹಣ ಡ್ರಾ ಮಾಡಿದ 1 ತಿಂಗಳೊಳಗಾಗಿ ಉಪಯೋಗ ಪ್ರಮಾಣ ಪತ್ರಗಳನ್ನು ಸಂಬಂಧಪಟ್ಟ ಸಹಕಾರ ಸಂಘಗಳಿಂದ ಪಡೆದು, ನಿಬಂಧಕರಿಗೆ ಸಲ್ಲಿಸತಕ್ಕದ್ದು. ನಿಬಂಧಕರು ಅನುದಾನ ಬಳಕೆ ಬಗ್ಗೆ ಸಮಗ್ರ ಬಳಕೆ ಪ್ರಮಾಣ ಪತ್ರಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಉದ್ದೇಶಿತ ಯೋಜನೆಯಡಿ ಸಹಕಾರ ಸಂಘಗಳನ್ನು ಪರಿಗಣಿಸುವಾಗ ಸಂಘದ ವ್ಯವಹಾರ, ಲೆಕ್ಕಪರಿಶೋಧನೆ, ಸಂಘದ ಸ್ಥಿತಿಗತಿ ಮುಂತಾದ ಅತಿ ಮುಖ್ಯ ಹಾಗೂ ಅವಶ್ಯಕ ಅಂಶಗಳ ಬಗ್ಗೆ ಪರಿಶೀಲಿಸಿ ಕಾರ್ಯವೈಖರಿಯ ವರದಿಯೊಂದಿಗೆ ಕ್ರಮಬದ್ಧವಾಗಿ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸುವುದು.

1) ನಿಗಧಿ ಪಡಿಸಿದ ನಮೂನೆಗಳಲ್ಲಿ ಸಂಘದ ಕಾರ್ಯದರ್ಶಿ ಹಾಗೂ ಸಹಕಾರ ನಿಬಂಧಕರ ಕಛೇರಿ ಮೊಹರು ಹಾಗೂ ಸಹಿ ಕಡ್ಡಾಯವಾಗಿರಬೇಕು.
2) ನಿಗಧಿ ಪಡಿಸಿದ ನಮೂನೆಗಳಲ್ಲಿ ಸಂಘದ ಕಾರ್ಯದರ್ಶಿ, ಉಪವಿಭಾಗದ ಸಹಾಯಕ ನಿಬಂಧಕರು ಹಾಗೂ ಜಿಲ್ಲಾ ಉಪ ನಿಬಂಧಕರ ಮೊಹರು ಹಾಗೂ ಸಹಿ ಕಡ್ಡಾಯವಾಗಿರಬೇಕು.
3) ದಿನಾಂಕ: 01–04–2015ರ ನಂತರದ ಆಡಳಿತ ಮಂಡಳಿ ಠರಾವು
4) ಸಕ್ಷಮ ಪ್ರಾಧಿಕಾರದಿಂದ ಪಡೆದ ಬಡತನ ರೇಖೆಗಿಂತ ಕೆಳಗಿರುವ (ಬಿಪಿಎಲ್ ಕಾರ್ಡ್‌ದಾರರಿಗೆ) ಪ್ರಮಾಣ ಪತ್ರವನ್ನು ಸದಸ್ಯರಿಂದ ಪಡೆದು ಸಂಘದಲ್ಲಿ ಇಟ್ಟುಕೊಂಡಿರುವ ಬಗ್ಗೆ ದೃಢೀಕರಣ ಪತ್ರ.
5) ಕಳೆದ ಮೂರು ವರ್ಷಗಳ ಸಂಘದ ಕಾರ್ಯವೈಖರಿ ವರದಿ.
6) ಕಳೆದ 2 ವರ್ಷಗಳ ಲೆಕ್ಕಪರಿಶೋಧನಾ ವರದಿಯ ಆರ್ಥಿಕ ತಃಖ್ತೆಗಳ ದೃಢೀಕೃತ ನಕಲು.
7) ಸಂಘದ ಷೇರಿನ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ದೃಢೀಕೃತ ಬೈಲಾ ಪ್ರತಿ.

<u>ನಿಬಂಧನೆ ಮತ್ತು ಷರತ್ತುಗಳು:–</u>

1) ಸಹಾಯಧನವನ್ನು ಮಂಜೂರು ಮಾಡಿರುವ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು.

2) ಮಂಜೂರಾತಿಗಾಗಿ ಪ್ರಸ್ತಾವೆಯೊಂದಿಗೆ ಸಲ್ಲಿಸಿರುವವರನ್ನು ಮಾತ್ರ ಸದಸ್ಯರನ್ನಾಗಿ ನೋಂದಾಯಿಸತಕ್ಕದ್ದು ಮತ್ತು ಸದರಿಯವರು ಈ ಹಿಂದೆ ಯಾವುದೇ ಇತರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದಲ್ಲಿ ಸದಸ್ಯರಾಗಿರಬಾರದು ಹಾಗೂ ಫಲಾನುಭವಿಯು ಸಂಘದ ಕಾರ್ಯವ್ಯಾಪ್ತಿಯಲ್ಲಿ ವಾಸಮಾಡುತ್ತಿರಬೇಕು.

3) ಒಂದೇ ಕುಟುಂಬದಲ್ಲಿ ಒಂದಕ್ಕಿಂತ ಹೆಚ್ಚು ಸದಸ್ಯರನ್ನು ನೋಂದಾಯಿಸಲು ಅವಕಾಶವಿರುವುದಿಲ್ಲ. ಆದಾಗ್ಯೂ ಸದರಿ ಅಂಶವನ್ನು ಹೊರತುಪಡಿಸಿ, ಉದ್ದೇಶಿತ ಯೋಜನೆಯಡಿ ಪ್ರಸ್ತಾವೆ ಸಲ್ಲಿಸಿದ್ದಲ್ಲಿ, ಸಂಬಂಧಿಸಿದ ಸಹಾಯಕ ನಿಬಂಧಕರು / ಉಪನಿಬಂಧಕರುಗಳೇ ನೇರ ಹೊಣೆಗಾರರಾಗಿರುತ್ತಾರೆ.

4) ಸದಸ್ಯರಾಗಬಯಸುವ ವ್ಯಕ್ತಿಯು ಸಕ್ಷಮ ಪ್ರಾಧಿಕಾರದಿಂದ ಪಡೆದ ಬಡತನ ರೇಖೆಗಿಂತ ಕೆಳಗಿರುವ (ಬಿಪಿಎಲ್ ಕಾರ್ಡ್‌ದಾರರಿಗೆ) ನೀಡುವ ಪ್ರಮಾಣ ಪತ್ರವನ್ನು ಪಡೆದು ಖಾತರಿಸಿಕೊಂಡು ಪರಿಶೀಲನೆ ಸಂದರ್ಭದಲ್ಲಿ ಹಾಜರುಪಡಿಸತಕ್ಕದ್ದು. ಸಂಘದ ವಶದಲ್ಲಿ ಇಟ್ಟುಕೊಂಡು ದೃಢೀಕರಿಸಿದ ಪ್ರಮಾಣ ಪತ್ರದೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸುವುದು.

5) ಸದಸ್ಯರಾಗಬಯಸುವ ವ್ಯಕ್ತಿಯು ಈ ಹಿಂದೆ ಸಂಘದಲ್ಲಿ ಸದಸ್ಯತ್ವ ಪಡೆದಿರುವುದಿಲ್ಲವೆಂದು ದೃಢೀಕರಿಸಿಕೊಂಡ ನಂತರವೇ ಪ್ರಸ್ತಾವನೆ ಸಲ್ಲಿಸತಕ್ಕದ್ದು.

6) ಉದ್ದೇಶಿತ ಫಲಾನುಭವಿಗಳು 18 ವರ್ಷ ಮೇಲ್ಪಟ್ಟ ವಯೋಮಿತಿಯಲ್ಲಿ ಇರುವವರಾಗಿರಬೇಕು, ಫಲಾನುಭವಿಗಳ ವಯಸ್ಸಿನ ಬಗ್ಗೆ ಸೂಕ್ತ ದೃಢೀಕರಣ ಪಡೆಯತಕ್ಕದ್ದು.

7) ಸದಸ್ಯರ ಷೇರುಧನಕ್ಕಾಗಿ ಮಂಜೂರು ಮಾಡಿರುವ ಸಹಾಯಧನವನ್ನು ಸಂಬಂಧಿಸಿದ ವ್ಯಕ್ತಿಯ ಷೇರು ಖಾತೆಗೆ ಜಮಾ ತೆಗೆದುಕೊಳ್ಳತಕ್ಕದ್ದು.

8) ಯಾವುದೇ ಕಾರಣಕ್ಕೂ ಈ ಹಣವನ್ನು ನಗದಾಗಿ ಸದಸ್ಯರಿಗೆ ಪಾವತಿ ಮಾಡಕೂಡದು.

9) ಈ ಸಹಾಯಧನದಿಂದ ಸದಸ್ಯರನ್ನಾಗಿ ನೋಂದಾಯಿಸಲ್ಪಟ್ಟ ಸದಸ್ಯಳು/ನು ಮೃತಪಟ್ಟಲ್ಲಿ ಆಕೆಯ–ಅವನ ನಾಮಿನಿಯನ್ನು ಸದಸ್ಯರನ್ನಾಗಿ ನೋಂದಾಯಿಸತಕ್ಕದ್ದು. ನಾಮಿನಿ ಇಲ್ಲವಾದ ಪಕ್ಷದಲ್ಲಿ ಮಂಜೂರಾಗಿರುವ ಷೇರಿನ ಮೊತ್ತವನ್ನು ಸರ್ಕಾರಕ್ಕೆ ಮರು ಪಾವತಿ ಮಾಡತಕ್ಕದ್ದು.

10) ಸಂಘದ ಉಪನಿಯಮಗಳಂತೆ ಸಂಘದ ಸದಸ್ಯತ್ವಕ್ಕಾಗಿ, ಸದಸ್ಯತ್ವ ಶುಲ್ಕ ಮತ್ತು ಪ್ರವೇಶ ಫೀಗಳನ್ನು ಸದಸ್ಯರೇ ಭರಿಸತಕ್ಕದ್ದು.

11) ಫಲಾನುಭವಿಗಳಿಗೆ ಕೂಡಲೇ, ಸಂಘದ ವತಿಯಿಂದ ಷೇರು ಪ್ರಮಾಣ ಪತ್ರವನ್ನು ವಿತರಿಸತಕ್ಕದ್ದು.

12) ಸಂಘದಲ್ಲಿ ಸಹಾಯಧನದ ಮೂಲಕ ಸದಸ್ಯರನ್ನಾಗಿ ನೋಂದಾಯಿಸಿದ ಬಗ್ಗೆ ಸದಸ್ಯರಿಗೆ ಪ್ರತ್ಯೇಕ ರಶೀದಿ ನೀಡತಕ್ಕದ್ದು.

13) ಉಪಯುಕ್ತತಾ (ಬಳಕೆ) ದೃಢೀಕರಣ ಪತ್ರವನ್ನು ಮಂಜೂರಾತಿ ನಂತರ ಡ್ರಾ ಮಾಡಿದ ಒಂದು ತಿಂಗಳ ಒಳಗಾಗಿ ನಿಬಂಧಕರಿಗೆ ಸಲ್ಲಿಸತಕ್ಕದ್ದು.

14) ದುರುಪಯೋಗವಾಗುವುದನ್ನು ತಡೆಗಟ್ಟಲು ಫಲಾನುಭವಿಯ ಪಡಿತರ ಚೀಟಿ ಸಂಖ್ಯೆಗಳು, ವಿಶಿಷ್ಟ ಗುರುತಿನ ಚೀಟಿಗಳು (ಆಧಾರ ಸಂಖ್ಯೆ) ಇತ್ಯಾದಿಗಳನ್ನು ಪರಿಶೀಲನೆ ಮಾಡಿದ ನಂತರವೇ ಸದಸ್ಯರನ್ನಾಗಿ ನೋಂದಾಯಿಸತಕ್ಕದ್ದು.

15) ಮಂಜೂರು ಮಾಡಿರುವ ಸಹಾಯಧನವು ಯಾವುದೇ ರೀತಿಯಲ್ಲಿ ದುರುಪಯೋಗವಾಗಿರುವುದು ಕಂಡುಬಂದಲ್ಲಿ ಅದನ್ನು ಆಗ ಇರುವ ಬ್ಯಾಂಕಿನ ಬಡ್ಡಿ ದರದಂತೆ ಬಡ್ಡಿ ಸಹಿತ ಮೂಲ ಹಣದೊಂದಿಗೆ ಸರ್ಕಾರಕ್ಕೆ ವಾಪಸ್ (ಮರಳಿ) ಪಡೆಯಲಾಗುವುದು.

16) ಸದಸ್ಯರನ್ನಾಗಿ ನೋಂದಾಯಿಸುವಲ್ಲಿ ಯಾವುದೇ ಬದಲಾವಣೆ ಮಾರ್ಪಾಡುಗಳನ್ನು ನಿಬಂಧಕರ ಪೂರ್ವಾನುಮತಿ ಇಲ್ಲದೇ ಮಾಡತಕ್ಕದ್ದಲ್ಲ.

17) ಈ ಯೋಜನೆಯನ್ವಯ ಸದಸ್ಯತ್ವ ಪಡೆದವರು ಸಂಘದ ಸದಸ್ಯತ್ವ ಬಿಟ್ಟುಕೊಡಲು ಮನವಿ ಸಲ್ಲಿಸಿದಲ್ಲಿ, ಸದಸ್ಯತ್ವ ಬಿಟ್ಟಲ್ಲಿ, ಈ ಮೊತ್ತವನ್ನು ವ್ಯಕ್ತಿಗೆ ಹಿಂದಿರುಗಿಸತಕ್ಕದ್ದಲ್ಲ. ಇಲಾಖೆ ಅನುಮತಿ ಪಡೆದು ಸರ್ಕಾರಕ್ಕೆ ಮರುಪಾವತಿ ಮಾಡತಕ್ಕದ್ದು.

18) ಸದಸ್ಯರಿಗೆ ಮಂಜೂರಾದ ಷೇರು ಮೊತ್ತವನ್ನು ಸದಸ್ಯರಿಂದ ಸಂಘಕ್ಕೆ ಬಾಕಿ ಇರುವ ಯಾವುದೇ ಮೊತ್ತಕ್ಕೆ ಹೊಂದಾಣಿಕೆ ಮಾಡಕೂಡದು.

19) ರಾಜ್ಯ ಸರ್ಕಾರ, ಸಹಕಾರ ಇಲಾಖೆಯ ಅಧಿಕಾರಿಗಳು, ಕಾಲಕಾಲಕ್ಕೆ ವಿಧಿಸಬಹುದಾದ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

20) ಉಳಿದಂತೆ ಇತರ ವರ್ಗಗಳಾದ ಪ.ಜಾ./ಪ.ಪಂ./ಅಲ್ಪಸಂಖ್ಯಾತ, ಮಹಿಳಾ ಮತ್ತು ಅಂಗವಿಕಲರ ಸಮುದಾಯಗಳ ನೋಂದಣಿಗೆ ಪ್ರಸ್ತುತ ಜಾರಿಯಲ್ಲಿರುವ ನಿಯಮಗಳು/ಕ್ರಮಗಳನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ

**P.R. 513**
**SC : 50**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಬಿ.ಬಿ. ತಂಬಾಕದ, ನಿವೃತ್ತ ಅಪರ ನಿರ್ದೇಶಕರು, ಅವರಿಗೆ ತಡವಾಗಿ ಪಾವತಿಸಿರುವ ನಿವೃತ್ತಿ ಸೌಲಭ್ಯಗಳ ಮೊತ್ತಕ್ಕೆ ಬಡ್ಡಿ ಪಾವತಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಆ.ಕು.ಕ ಸೇವೆಗಳು ಅವರ ಪತ್ರ ಸಂಖ್ಯೆ: ಹೆಚ್‌ಆರ್‌ಓ/104/2013-14, ದಿನಾಂಕ: 24-02-2015.

**ಪ್ರಸ್ತಾವನೆ :**

ಡಾ॥ ಬಿ.ಬಿ. ತಂಬಾಕದ, ನಿವೃತ್ತ ಅಪರ ನಿರ್ದೇಶಕರು, (ಸರ್ಕಾರಿ ಔಷಧ ಮಳಿಗೆ, ಬೆಂಗಳೂರು) ಅವರು ದಿನಾಂಕ: 31-05-2003 ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿದ್ದು, ಅವರ ವಿರುದ್ಧ ಲೋಕಾಯುಕ್ತ ಪ್ರಕರಣದ ವಿಚಾರಣೆ ಬಾಕಿಯಿದ್ದ ಕಾರಣ ಕೆ.ಸಿ.ಎಸ್.ಆರ್. ನಿಯಮ 214 ಪ್ರಕಾರ ತಾತ್ಕಾಲಿಕ ಪಿಂಚಣಿ ಹೊರತುಪಡಿಸಿ, ಉಳಿದ ನಿವೃತ್ತಿ ಉಪದಾನಗಳನ್ನು ತಡೆಹಿಡಿಯಲಾಗಿತ್ತು. ಈ ಕಾರಣದಿಂದ ವಯೋನಿವೃತ್ತಿ ನಂತರ ನೀಡಬೇಕಾಗಿದ್ದ ಗಳಿಕೆ ರಜೆ ನಗದೀಕರಣ ಸೌಲಭ್ಯವನ್ನು ಕ.ನಾ.ಸೇವಾ ನಿಯಮಾವಳಿ ನಿಯಮ 118 (ಎ)(2) ಪ್ರಕಾರ ತಡೆಹಿಡಿಯಲಾಗಿ, ನಂತರ, ಅವರ ವಿರುದ್ಧದ ಆರೋಪವು ಸಾಬೀತಾಗದೇ ಇದ್ದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಆಕುಕ 99 ಎಂಎಸ್‌ಎ 2002, ದಿನಾಂಕ: 24-06-2013 ರಲ್ಲಿ ಅವರ ವಿರುದ್ಧದ ಆರೋಪವನ್ನು ಕೈಬಿಡಲಾಗಿತ್ತು. ಈ ಹಿನ್ನೆಲೆಯಲ್ಲಿ, ದಿನಾಂಕ: 06-12-2013 ರಲ್ಲಿ ಸದರಿ ನಿವೃತ್ತ ವೈದ್ಯರಿಗೆ ನಿವೃತ್ತಿ ನಂತರದ ಗಳಿಕೆ ರಜೆ ನಗದೀಕರಣ ಸೌಲಭ್ಯವನ್ನು ಮಂಜೂರು ಮಾಡಿರುವುದರಿಂದ ತಡವಾಗಿ ಪಾವತಿಸಿರುವ ಡಿ.ಸಿ.ಆರ್.ಜಿ. ಹಾಗೂ ನಗದೀಕರಣ ಮೊತ್ತಕ್ಕೆ ಬಡ್ಡಿ ಪಾವತಿಸುವ ಬಗ್ಗೆ ಮುಂದಿನ ಸೂಕ್ತ ಕ್ರಮ ಕೋರಿ ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ವಿಳಂಬವಾಗಿ ಪಾವತಿಸಲಾದ ಡಿ.ಸಿ.ಆರ್.ಜಿ ಮೊತ್ತ `2,50,000.00 ಮತ್ತು ಅರ್ಜಿತ ರಜೆ ನಗದೀಕರಣದ ಮೊತ್ತ `1,84,140.00 ಕ್ಕೆ ಶೇ. 8 ರಂತೆ ಬಡ್ಡಿ ಲೆಕ್ಕಾಚಾರ ಮಾಡಿ ಆದೇಶ ಹೊರಡಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 137 ಹೆಚ್‌ಎಸ್‌ಹೆಚ್ 2015, ಬೆಂಗಳೂರು, ದಿನಾಂಕ: 11-08-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಆಇ (ವಿಶೇಷ) 199 ಪಿಇಎನ್ 93, ದಿನಾಂಕ: 13-09-1994 ಮತ್ತು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ (ವಿಶೇಷ) 01 ಪಿಇಎನ್ 2003, ದಿನಾಂಕ: 21-08-2003 ಹಾಗೂ ಸುತ್ತೋಲೆ ಸಂಖ್ಯೆ: ಆಇ (ವಿಶೇಷ) 1 ಪಿಇಎನ್ 2004, ದಿನಾಂಕ: 02-09-2004 ರನ್ವಯ ನಿವೃತ್ತ ಅಪರ ನಿರ್ದೇಶಕರಾದ ಡಾ॥ ಬಿ.ಬಿ. ತಂಬಾಕದ (ಸರ್ಕಾರಿ ಔಷಧ ಮಳಿಗೆ, ಬೆಂಗಳೂರು) ಅವರಿಗೆ ನಿವೃತ್ತಿ ಹೊಂದಿದ ನಾಲ್ಕನೇ ತಿಂಗಳ ಪ್ರಾರಂಭದಿಂದ ಮಹಾಲೇಖಪಾಲರು ಪ್ರಾಧಿಕರಿಸಿದ ಪತ್ರದ ದಿನಾಂಕದ ಹಿಂದಿನ ತಿಂಗಳ ಕೊನೆಯ ದಿನಾಂಕದವರೆಗೆ ಅಂದರೆ, ಶ್ರೀಯುತರಿಗೆ ವಿಳಂಬವಾಗಿ ಪಾವತಿಸಲಾದ ನಿವೃತ್ತಿ ಉಪದಾನದ ಮೊತ್ತ `2,50,000.00 ಗಳಿಗೆ ದಿನಾಂಕ: 01-09-2003 ರಿಂದ 30-06-2013 ರವರೆಗೆ-118 ತಿಂಗಳುಗಳಿಗೆ ಶೇ. 8 ರಂತೆ ಬಡ್ಡಿ ಮೊತ್ತ `1,96,667.00 ಮತ್ತು ಗಳಿಕೆ ರಜೆ ನಗದೀಕರಣದ ಮೊತ್ತ `1,84,140.00 ಗಳಿಗೆ ದಿನಾಂಕ: 01-09-2003 ರಿಂದ 30-11-2013 ರವರೆಗೆ-123 ತಿಂಗಳುಗಳಿಗೆ ಶೇ.8 ರಂತೆ ಬಡ್ಡಿ ಮೊತ್ತ `1,50,995.00 ಗಳು ಸೇರಿ ಒಟ್ಟು ಮೊತ್ತ `3,47,662.00 (ಮೂರು ಲಕ್ಷದ ನಲವತ್ತೇಳು ಸಾವಿರದ ಆರುನೂರ ಅರುವತ್ತೆರಡು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ: ಆಕುಕ 586 ಆಂಆಸ 2015, ದಿನಾಂಕ: 26-06-2015 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 632 ವೆಚ್ಚ-5 2015, ದಿನಾಂಕ: 01-08-2015 ರಲ್ಲಿ ನೀಡಿರುವ ಸಹಮತದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 514

**ಬಿ.ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

## COMMERCE AND INDUSTRIES SECRETARIAT

**Sub :** Sanction of Special Incentives and Concessions to M/s. JSW Steel Ltd, for the expansion of their Integrated Steel Plant at Toranagallu, Sandur Taluk, Ballari District.

**Ref :**

1. Government Order No. CI 29 SPI 1994, dated 10-11-1994.
2. Government Order No. CI 29 SPI 1994, dated 25-05-1999.
3. Government Order No. CI 121 SPI 2004, dated 17-02-2005.
4. Government Order No. CI 82 SPI 2005, dated 30-03-2005.
5. Government Order No. CI 121 SPI 2004, dated 11-10-2005.
6. Government Order No. CI 262 SPI 2009, dated 29-10-2009.
7. Government Order No. CI 77 SPI 2011, dated 24-02-2011.
8. Government Order No. CI 140 SPI 2012, dated 21-04-2012.
9. Government Order No. CI 361 SPI 2012, dated 29-10-2012.
10. Proceeding of the Empowered Cabinet Sub-Cabinet Sub-Committee fifth meeting held on 03-06-2015.

**PREAMBLE :**

M/s. JSW Steel Ltd., has proposed to increase the installed capacity of the Integrated Steel Plant from 10 MMTPA to 16 MMTPA with 600 MW Captive Power Plant within the already allotted 8,042 acres of land with an investment of about Rs. 15,131,70 Cr., generating additional employment to about 6,000 persons. The proposal was discussed in the 19th State High Clearance Committee meeting held on 31-08-2009 and Government Order No. CI 262 SPI 2009, dated 29-10-2009 was issued. M/s. JSW Steel Ltd, has taken effective steps to implement the project.

In addition, Government has approved the investment proposal of JSW Projects, a sister concern of JSW Steel Ltd to establish 'CDQ and DRI Plant' with an investment of Rs. 2,400 Cr. generating employment to about 303 persons vide Government Order No. CI 77 SPI 2012, dated 24-02-2011 to be located at Toranagallu. The implementation of the projects has commenced.

Government has also approved the investment proposal of JSW Steel Ltd., to establish 'Cold Rolled Mill' with an investment of Rs. 4,190.4 Cr. generating employment to about 1,264 persons vide Government Order No. CI 140 SPI 2012, dated 21-04-2012 to be located at Toranagallu. The implementation of the projects has commenced.

M/s. JSW Steel Ltd., has desired to implement the project approved vide Government Order No. CI 262 SPI 2009, dated 29-10-2009 in 2 phases and obtained approval vide Government Order No. CI 361 SPI 2012, dated 29-10-2012.

M/s. JSW Steel Ltd. submitted a proposal to Commissioner for Industrial Development and Director of Industries & Commerce and requested him for sanction of special package of incentives & concessions considering their investment as "Mega" project.

Commissioner for ID and Director of I&C examined the proposal and recommended for sanction of special incentives and concessions to M/s. JSW Steel Ltd.

The subject was discussed in detail in the Empowered Cabinet Sub-Committee meeting held on 03-06-2015, Government has considered the recommendations of the Empowered Cabinet, Sub-Cabinet and hence the order.

**GOVERNMENT ORDER NO. CI 17 SPI 2013, BENGALURU, DATED: 16.07.2015**

In the circumstances explained in the preamble, Government is pleased to sanction the following special incentives and concessions to M/s. JSW Steel Ltd.

a) 75% of Eligible Gross VAT as interest free loan for the initial 10 years from the date of commencement of commercial production in the expansion programme and 50% of Eligible Gross VAT as interest free loan for further period of 10 years for all the end products of the industry. The Eligible Gross VAT is calculated as Gross VAT paid by JSW Steel Ltd., on sales made to the final consumer in the State over and above the base production of the unit during 2013-14 i.e., Gross VAT paid above Rs. 200 Cr. per annum.

   The loan received in the 1st year shall be repaid in the 15th year ; loan received in the 2nd years shall be repaid in 16th year and so on (14th years moratorium on each installment).

b) 95% of the eligible CST refund for 5 years or till the introduction of GST regime, whichever is earlier. The eligible CST is calculated as CST paid by JSW Steel Ltd., on the interstate sales made over and above the base production during 2013-14 i.e., CST paid above Rs. 300 Cr. per annum. The 5 years period is counted from the date of commencement of commercial production in the 1st phase of the expansion programme.

c) Entry tax exemption for 8 years during implementation of all the 3 projects (M/s. JSW Steel Ltd., expansion JSW Steel CRM2 & JSW Projects CDQ & DRI Plant) on purchase of capital goods, plant and machinery including the equipments for electricity generation for captive purpose.

d) Entry tax exemption for 10 years on raw materials and consumable components for all the 3 projects (M/s. JSW Steel Ltd., expansion, JSW Steel CRM2 & JSW Projects CDQ & DRI Plant) from the date of commencement of commercial production in the 1st phase of expansion programme.

e) One time capital subsidy for ETP/HWTSDF limited to Rs. 200 lakhs.

f) The total of all the above incentives & concessions shall not exceed the eligible fixed investment made in the project (The investment made in all the above 3 projects i.e., expansion programme of JSW 10 to 16 MMTPA, CRM mill and DRI & CDQ plant, to be added).

   **Note :** The above package of incentives and concessions will be offered, subject to the following conditions :

   1) M/s. JSW Steel Ltd. to implement the three approved projects involving investment of about Rs. 20,000 Cr. over a period of 10 years starting from 2011-2012 in two phases.

   2) M/s. JSW Steel Ltd., along with its Group companies shall invest at least Rs. 5,000 Cr. In the expansion programme and provide at least 1,500 additional employment at the time of commencement of commercial production in the 1st phase.

3) M/s. JSW Steel Ltd., shall invest at least additional Rs. 15,000 Crs. in the expansion programme and provide employment to additional 4,500 persons by December, 2021 failing which the special incentives availed will have to be repaid with 9% simple interest.

4) M/s. JSW Steel Ltd., shall provide employment to locals/kannadigas as per the provision made in the Industrial Policy 2009-14.

By Order and in the name of the Governor of Karnataka,

**S. UMADEVI,**

Desk Officer (Technical Cell),

Commerce & Industries Department.

**P.R. 480**

**S.C. 25**

## COMMERCE AND INDUSTRIES SECRETARIAT

**Sub :** Sanction of Special Incentives and Concessions to M/s. Asian Paints Ltd., to establish "6 lakh KLPA water based paints manufacturing unit" at Thandya Industrial Area, Nanjanagudu Taluk, Mysuru District.

**Ref :**
1. Government Order No. CI 155 SPI 2013, dated 27-09-2013.
2. Government Order No. CI 155 SPI 2013, dated 22-09-2014.
3. Proceeding of the Empowered Cabinet Sub-Cabinet Sub-Committee fifth meeting held on 03-06-2015.

**PREAMBLE :**

M/s. Asian Paints Ltd., has proposed to establish a 6 lakh KLPA water based paints manufacturing unit at Kochanahalli Industrial Area, Mysuru District with an investment of Rs. 2,300 Crs., generating employment to about 900 persons. The proposed investment also envisages employment to 4,500 persons indirect (through vendors & logistic support activities).

The proposal was discussed in the 32nd SHLCC meeting held on 23-08-2013 and approved. Accordingly, Government Order No. CI 155 SPI 2013, dated 27-09-2013 was issued.

Since land was not available in Kochanahalli Industrial Area, Mysuru District, M/s Asian Paints Ltd., requested for change of location to Thandya 2nd Phase Industrial area, Nanjanagudu Taluk, Mysuru District. The proposal was approved in the 35th SHLCC meeting held on 14-05-2015. Accordingly, Government Order No. CI 155 SPI 2013, dated 26-06-2014 was issued approving the change of location.

KIADB has already allotted 175 acres of land at Immavu Village, Nanjanagudu Taluk, Mysuru District in their industrial area, M/s. Asian Paints Ltd., have made payment of Rs. 14.50 Crs. to KIADB.

M/s Asian Paints Ltd., had requested for sanction of special incentives and concessions as per Industrial Policy, 2009-14. Commissioner for Industrial Development and Director of Industries & Commerce has examined the request of the company and recommended for sanction of special incentives & concessions vide his letters dated 03-12-2013 and 01-01-2015.

The subject was discussed in detail in the Empowered Cabinet Sub-Committee meeting held on 03-06-2015. Government has considered the recommendations of the Empowered Cabinet Sub-Cabinet and hence the order.

### GOVERNMENT ORDER No. CI 155 SPI 2013, BENGALURU, DATED: 16.07.2015

In the circumstances explained in the preamble, Government is pleased to sanction the following special incentives and concessions to M/s. Asian Paints Ltd.

a) Interest free loan to the extent of 100% net VAT+CST from the date of commencement of commercial production for a maximum period of 11 years subject to a ceiling limit of 100% of Value of Fixed Assets (VFA) for each stage of implementation of project.

**Note :**

i. Commencement of commercial production in the 4 lakh KLPA plant is considered as the completion of the 1st stage and commencement of commercial production in the 2nd unit of 2 KLPA is considered as the completion of the 2nd stage.

ii. Implementation of 1st stage has to be completed within 4 years from the date of handing over the possession of land by KIADB. Implementation of the 2nd stage has to be completed in the next 3 years i.e., within 7 years from the date of handing over the possession of land by KIADB. Earlier completions are permitted.

iii. The loan availed in the 1st year shall be repaid in the 12th year and the loan availed in the 2nd year in the 13th year and so on.

iv. The incentive is limited to either the period or the ceiling limits as prescribed above, whichever is reached earlier and no carry forward is permitted.

v. On introduction of GST, no compensatory incentive will be provided in case of abolition of CST or any other tax or change in rate of tax, which currently accurse to the State Government.

b) Entry tax exemption for procurement of capital goods, raw materials, stamp duty exemption, subsidy for Effluent Treatment Plant, refund of VAT on renewable energy equipments shall be as per standard package offered in Industrial Policy, 2014-19.

c) Cumulative value of all the incentives shall not exceed 115% of the VFA made in unit.

By Order and in the name of the Governor of Karnataka,

**P.R. 481**

**S.C. 25**

**S. UMADEVI,**

Desk Officer (Technical Cell),

Commerce & Industries Department.

## COMMERCE AND INDUSTRIES SECRETARIAT

**Sub :** Sanction of Special Incentives and Concessions to M/s. Volvo India Pvt. Ltd., to establish "Commercial Vehicles Manufacturing Unit" at Hosakote Taluk, Bengaluru Rural District.

**Ref :**
1. Government Order No. CI 11 SPI 2014, dated 03-01-2014.
2. Proceeding of the Empowered Cabinet Sub-Cabinet Sub-Committee fifth meeting held on 03-06-2015.

### PREAMBLE :

M/s. Volvo India Pvt. Ltd, has proposed to establish a Commercial Vehicles (Trucks & Buses) Manufacturing unit at Sonnenayakanahalli, Malur Taluk, Kolar District and Manchappanahalli, Hosakote Taluk, Bengaluru Rural District, with an investment of Rs. 974 Cr., to generate employment opportunities for 2,125 persons. The proposal was submitted to the Government of Karnataka in 2012. The subject was discussed in the 33rd SHLCC meeting held on 19-11-2013 and approved. Accordingly, Government Order No. CI 11 SPI 2014, dated 3-01-2014 was issued.

M/s. Volvo India Pvt. Ltd., has commenced the implementation of the expansion project approved and invested Rs. 172 Cr. upto 31-12-2014. Balance investment of about Rs. 700 to 800 Cr. is in the pipeline.

The Company has requested for sanction of special incentives and concessions vide their letter dated 16-06-2014.

Commissioner for Industrial Development and Director of Industries & Commerce has examined the request of the company and recommended for sanction of special incentives and concessions, vide his letter No. ಕೈವಾಇ/ಕೈಆ/E5/201/Volvo (India)/ಕೋಲಾರ/2014-15, dated 31-07-2014.

The subject was discussed in detail in the Empowered Cabinet Sub-Committee meeting held on 03-06-2015. Government has considered the recommendations of the Empowered Cabinet Sub-Cabinet and hence the order.

### GOVERNMENT ORDER No. CI 11 SPI 2014, BENGALURU, DATED: 16.07.2015

In the circumstances explained in the preamble, Government is pleased to sanction the following special incentives and concessions to M/s. Volvo India Pvt. Ltd.

a) Waiver of 75% conversion fees for converting the land from agriculture to Industrial use.

b) 75% exemption from payment of stamp duty and concessional registration charges at rate of Re. 1/- per Rs. 1000/-.

c) 100% Entry Tax exemption for purchase of plant & machinery and capital goods including captive generation equipments for 5 years from the commencement of implementation of the project.

d) 25% of the assessed eligible gross VAT as interest free loan for initial period of 7 years commencing from January, 2018 or from the date of commencement of commercial production of the unit, whichever is earlier, over and above the gross VAT paid by the company in 2012-13, subject to a ceiling limit of 50% of total value of fixed assets made in the expansion programme.

Repayment of the loan shall be in 7 annual installments after the 10 years i.e., the loan availed in the first year shall be repaid in full in the 11th year, the loan availed in the second year shall be repaid in full in the 12th year and so on.

**NOTE :** The above special package of incentives & concessions will be applicable only if M/s. Volvo India Pvt. Ltd., invests at least Rs. 750 Cr., in the expansion programme by 2020, generates additional employment to the extent of 1500 persons and provides employment to the locals as per the terms & conditions of Industrial Policy, 2009-14. In case the investment falls below Rs. 750 Cr. by 2020, the Govt. reserves the right to recover the VAT loan with interest.

By Order and in the name of the Governor of Karnataka,

**S. UMADEVI,**

Desk Officer (Technical Cell),

Commerce & Industries Department.

**P.R. 482**

**S.C. 25**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಯಾದಗಿರಿ ಜಿಲ್ಲೆ, ಯಾದಗಿರಿ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪ)ಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ನಅಇ: 150 ಗುಅಪ್ರಾ: 2013, ದಿ: 01.03.2014.
2. ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ ಯಾದಗಿರಿ, ಇವರ ಪತ್ರ ಸಂಖ್ಯೆ: ನಪ್ರಾಯಾ:ಮ.ಯೋ: 2015–16, ದಿನಾಂಕ: 24.06.2015.
3. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ: ನಗ್ರಾಯೋ/ಗುವಿ (30)/ಯಾದಗಿರಿ/ಮಾ.ಯೋ(ಪ) (ಅಂತಿಮ)/2013–14 ರಲ್ಲಿ ನೀಡಿರುವ ಅಭಿಪ್ರಾಯ ದಿನಾಂಕ: 09.07.2015 ಮತ್ತು 01.08.2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಯಾದಗಿರಿ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪ)ಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಯಾದಗಿರಿ ನಗರಾಭಿವೃದ್ಧಿ ಪ್ರಾಧಿಕಾರವು, ಯಾದಗಿರಿ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ (ಪ) (ಅಂತಿಮ) ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)(2)ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿದೆ.

ಮೇಲೆ ಓದಲಾದ (3) ರಲ್ಲಿ, ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಕಡತದಲ್ಲಿ, ಯಾದಗಿರಿ ಪಟ್ಟಣದ ಜನಸಂಖ್ಯೆಯು 2031ರಲ್ಲಿ 2,00,000ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾಯೋಜನೆಯನ್ನು ತಯಾರಿಸಲಾಗಿದೆ. ಯಾದಗಿರಿ ನಗರದ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 2176.95 ಹೆಕ್ಟೇರ್ ಪ್ರದೇಶವನ್ನು ನಗರದ ಅಭಿವೃದ್ಧಿಗಾಗಿ ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾಯೊಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ (12) ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ ಒಟ್ಟು 2176.95 ಹೆಕ್ಟೇರ್ ಪ್ರದೇಶದ ಪೈಕಿ, ವಸತಿಗಾಗಿ 1213.68 ಹೆಕ್ಟೇರ್ (ಶೇ. 55.75), ವಾಣಿಜ್ಯಕ್ಕಾಗಿ 100.40 ಹೆಕ್ಟೇರ್ (ಶೇ. 4.61), ಕೈಗಾರಿಕೆಗಾಗಿ 69.23 ಹೆಕ್ಟೇರ್, (ಶೇ.3.18), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ 136.57 ಹೆಕ್ಟೇರ್, (ಶೇ.6.27) ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 220.46 ಹೆಕ್ಟೇರ್ (ಶೇ.10.12) ಹಾಗೂ ಸಾರಿಗೆ/ಸಂಚಾರ ವಲಯಕ್ಕೆ 419.81 ಹೆಕ್ಟೇರ್ (ಶೇ.19.30), ನಾಗರಿಕ ಸೌಲಭ್ಯಕ್ಕಾಗಿ 16.80 ಹೆಕ್ಟೇರ್ (ಶೇ.0.77) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3) ರನ್ವಯ **ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ**. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 156 ಗುಅಪ್ರಾ 2015, ದಿನಾಂಕ: 20.08.2015.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಯಾದಗಿರಿ ಜಿಲ್ಲೆ, ಯಾದಗಿರಿ ನಗರಾಭಿವೃದ್ಧಿ ಪ್ರಾಧಿಕಾರವು ತಯಾರಿಸಿ ಸಲ್ಲಿಸಿರುವ ಯಾದಗಿರಿ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆ (ಪ) ಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ 13(3)ರನ್ವಯ ಸರ್ಕಾರದ **ಅಂತಿಮ ಅನುಮೋದನೆಯನ್ನು ನೀಡಲಾಗಿದೆ**. ಮಹಾಯೋಜನೆ (ಪ) ಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಷರತ್ತು:

- ಈ ಆದೇಶದ ದಿನಾಂಕದಿಂದ ಎರಡು ವರ್ಷಗಳವರೆಗೆ ಪ್ರಾಧಿಕಾರವು ಯಾವುದೇ ಭೂ ಉಪಯೋಗ ಬದಲಾವಣೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಕೂಡದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿಗಳು

ನಗರಾಭಿವೃದ್ಧಿ ಇಲಾಖೆ

**PR. 531**

**SC. 150**

## ಕಂದಾಯ ಸಚಿವಾಲಯ

**ವಿಷಯ:** ರಾಮನಗರ ಜಿಲ್ಲೆ, ರಾಮನಗರ ತಾಲ್ಲೂಕು, ಕಸಬಾ ಹೋಬಳಿ, ಬೋಳಪ್ಪನಹಳ್ಳಿ ಅಮಾನಿಕೆರೆ ಸ.ನಂ.119, 120 ಮತ್ತು ಜೀಗೇನಹಳ್ಳಿ ಗ್ರಾಮದ ಸ.ನಂ.27, 28 ಮತ್ತು 29 ರ ಮಧ್ಯೆ ಇರುವ 0–16 ಗುಂಟೆ ಜಮೀನನ್ನು ಶ್ರೀ ಎ.ವಿ.ಭಾಸ್ಕರ್ ಬಿನ್ ಲೇಟ್ ಎ.ಎಂ.ವೆಂಕಟಸ್ವಾಮಯ್ಯ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ರಾಜಿಕ/ಎಲ್‌ಎನ್‌ಡಿ/ಸಿಆರ್/808/11-12, ದಿನಾಂಕ:23–04–2012 ಮತ್ತು 30–05–2012.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 328 ಎಲ್‌ಜಿಬಿ 2012, ದಿನಾಂಕ:13–11–2013.
3. ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ರಾಜಿಕ/ ಎಲ್‌ಎನ್‌ಡಿ/ಸಿಆರ್/808/11-12 ದಿನಾಂಕ:19–06–2014.
4. ಸರ್ಕಾರದ ಅಧಿಸೂಚನೆ ಸಂಖ್ಯೆ:ಆರ್‌ಡಿ 234 ಎಲ್‌ಜಿಬಿ 2014, ದಿನಾಂಕ: 16–09–2014.
5. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 9 ಎಲ್‌ಜಿಪಿ 2015, ದಿನಾಂಕ: 09–06–2015.
6. ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ರಾಜಿಕ/ ಎಲ್‌ಎನ್‌ಡಿ/ಸಿಆರ್/808/11-12, ದಿನಾಂಕ:23–07–2015.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರ ದಿನಾಂಕ:23–04–2012 ಮತ್ತು 30–05–2012 ಪತ್ರಗಳಲ್ಲಿ ರಾಮನಗರ ಜಿಲ್ಲೆ, ರಾಮನಗರ ತಾಲ್ಲೂಕು, ಕಸಬಾ ಹೋಬಳಿ, ಬೋಳಪ್ಪನಹಳ್ಳಿ ಅಮಾನಿಕೆರೆ ಸ.ನಂ.119, 120 ಮತ್ತು ಜೀಗೇನಹಳ್ಳಿ ಗ್ರಾಮದ ಸ.ನಂ.27, 28 ಮತ್ತು 29 ರ ಮಧ್ಯೆ ಇರುವ 0–16 ಗುಂಟೆ ಹದ್ದುಹಿಡಿದ ಹಳ್ಳದ ಖರಾಬು ಜಮೀನಿದ್ದು, ಈ ಖರಾಬು ಜಮೀನನ್ನು ಅರ್ಜಿದಾರರಾದ ಶ್ರೀ ಎ.ವಿ.ಭಾಸ್ಕರ್ ಬಿನ್ ಲೇಟ್ ಎ.ಎಂ.ವೆಂಕಟಸ್ವಾಮಯ್ಯ ರವರು ಐನ್ ಜಮೀನಾಗಿ ಪರಿವರ್ತಿಸಿಕೊಂಡು ಖರಾಬು ಜಮೀನನ್ನು ಸಮನ್ವಯ ಮಾಡಿಕೊಂಡು ಸುಮಾರು 40 ವರ್ಷಗಳಿಂದ ತೆಂಗಿನ ಮರಗಳನ್ನು ಬೆಳೆಸಿರುತ್ತಾರೆ. ಈ ಖರಾಬು ಜಮೀನು ಹಳ್ಳದ ಖರಾಬು ಜಮೀನಿನ ಲಕ್ಷಣಗಳನ್ನು ಕಳೆದುಕೊಂಡು ವ್ಯವಸಾಯಕ್ಕೆ ಯೋಗ್ಯವಾದ ಜಮೀನಾಗಿರುತ್ತದೆ ಮತ್ತು ಸಾರ್ವಜನಿಕರಿಗೆ ಉಪಯೋಗವಿಲ್ಲದ ಜಮೀನಿನ ಪ್ರದೇಶವಾಗಿರುತ್ತದೆ. ಈ ಹಿನ್ನೆಲೆಯಲ್ಲ ರಾಮನಗರ ತಹಶೀಲ್ದಾರ್ ರವರು ಖುದ್ದು ಸ್ಥಳ ತನಿಖೆ ಮಾಡಿ ಸುತ್ತಲೂ ಅರ್ಜಿದಾರರ ಹಿಡುವಳಿ ಜಮೀನುಗಳನ್ನು ಹೊಂದಿರುವುದರಿಂದ ಅರ್ಜಿದಾರರಿಗೆ ಮಂಜೂರು ಮಾಡಲು ಕರ್ನಾಟಕ ಭೂಕಂದಾಯ ಅಧಿನಿಯಮ, 1964 ಕಲಂ 68(1) ರಡಿ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಅದರಂತೆ ಮೇಲೆ ಓದಲಾದ (2) ಮತ್ತು (4)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 328 ಎಲ್‌ಜಿಬಿ 2012 ದಿನಾಂಕ:13–11–2013 ರಲ್ಲಿ ಸದರಿ ಜಮೀನು ಹಳ್ಳದ ಖರಾಬು ಲಕ್ಷಣಗಳನ್ನು ಕಳೆದುಕೊಂಡಿರುವುದರಿಂದ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಹಕ್ಕಿನಿಂದ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ಕಲಂ 68(1) ರ ಅಡಿಯಲ್ಲಿ ವಿಹಿತಗೊಳಿಸಿ ಅಧಿಸೂಚನೆ ಹೊರಡಿಸಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರ ಪತ್ರ ದಿನಾಂಕ:19–06–2014 ರಲ್ಲಿ ತಿಳಿಸಿರುವಂತೆ ನಮೂನೆ–27ರ ಅಧಿಸೂಚನೆಯನ್ನು ಗ್ರಾಮದಲ್ಲಿ ಪ್ರಚುರಪಡಿಸಲಾಗಿದ್ದು, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವಾದ್ದರಿಂದ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ಕಲಂ 68(5) ರಡಿ ಅಂತಿಮ ಅಧಿಸೂಚನೆ ಹೊರಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 234 ಎಲ್‌ಜಿಬಿ 2013 ದಿನಾಂಕ:16–09–2014 ರಲ್ಲಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ಕಲಂ 68(5)ರಡಿ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಹಕ್ಕಿನಿಂದ ವಿಹಿತಗೊಳಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಿದ್ದು, ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ:16–10–2014 ರಂದು ಪ್ರಕಟಗೊಂಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5) ದಿನಾಂಕ:09–06–2015 ರ ಸರ್ಕಾರದ ಅಧಿಸೂಚನೆಯಂತೆ ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ಕ್ಕೆ ಹೊರಡಿಸಿರುವ ತಿದ್ದುಪಡಿ ಪ್ರಕಾರ ಸದರಿ ನಿಯಮಗಳ 22ಎ(1)(7) ರಲ್ಲಿ ಉಲ್ಲೇಖಿಸಿದ ಖರಾಬು ಜಮೀನುಗಳಿಗೆ ಮಾರುಕಟ್ಟೆ ದರದ ಎರಡು ಪಟ್ಟು ವಿಧಿಸಿ ಸಾಮಾನ್ಯ ವರ್ಗದವರಿಗೆ ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ.

ಅದರಂತೆ ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರಿಂದ ವರದಿ ಕೋರಿದ್ದು, ಮೇಲೆ ಓದಲಾದ (6)ರ ಪತ್ರದಲ್ಲಿ ಬೋಳಪ್ಪನಹಳ್ಳಿ ಅಮಾನಿಕೆರೆ ಗ್ರಾಮದ ಸ.ನಂ.119, 120ರ ತರಿ ಜಮೀನಿನ ಮಾರುಕಟ್ಟೆ ದರ ಎಕರೆಗೆ ₹ 18.00 ಲಕ್ಷವಿದ್ದು, ಬೋಳಪ್ಪನಹಳ್ಳಿ ಅಮಾನಿಕೆರೆ ಗ್ರಾಮದ ಸ.ನಂ.119 ಕ್ಕೆ ಹೊಂದಿಕೊಂಡಂತೆ ಹದ್ದಿಗೆ ಗಿಡದ ಹಳ್ಳದ 0–03 ಗುಂಟೆ ಪ್ರದೇಶ ಹಾಗೂ ಸ.ನಂ.120ಕ್ಕೆ ಹೊಂದಿಕೊಂಡಂತೆ ಹದ್ದಿಗೆ ಹಿಡಿದ ಹಳ್ಳದ 0–13 ಗುಂಟೆ ಜಮೀನು ಒಟ್ಟು 0–16 ಗುಂಟೆ ಜಮೀನಿನ ಮಾರುಕಟ್ಟೆ ದರ ₹ 7.20 ಲಕ್ಷ (ಏಳು ಲಕ್ಷದ ಇಪತ್ತು ಸಾವಿರ ರೂಪಾಯಿಗಳು ಮಾತ್ರ) ಗಳಾಗುತ್ತದೆಂದು ತಿಳಿಸಿರುತ್ತಾರೆ. ಅದರಂತೆ ದರ ವಿಧಿಸಿ ಮೇಲ್ಕಂಡ ವ್ಯಕ್ತಿಗಳಿಗೆ ಸದರಿ ಜಮೀನನ್ನು ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 234 ಎಲ್‌ಜಿಬಿ 2014, ಬೆಂಗಳೂರು, ದಿನಾಂಕ:05.10.2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ರಾಮನಗರ ಜಿಲ್ಲೆ, ರಾಮನಗರ ತಾಲ್ಲೂಕು, ಕಸಬಾ ಹೋಬಳಿ, ಬೋಳಪ್ಪನಹಳ್ಳಿ ಅಮಾನಿಕೆರೆ ಸ.ನಂ.119, 120 ಮತ್ತು ಜೀಗೇನಹಳ್ಳಿ ಗ್ರಾಮದ ಸ.ನಂ.27, 28 ಮತ್ತು 29 ರ ಮಧ್ಯೆ ಇರುವ 0–16 ಗುಂಟೆ ಜಮೀನನ್ನು ಶ್ರೀ ಎ.ವಿ.ಭಾಸ್ಕರ್ ಬಿನ್ ಲೇಟ್ ಎ.ಎಂ.ವೆಂಕಟಸ್ವಾಮಯ್ಯ ಇವರಿಗೆ ಕರ್ನಾಟಕ ಭೂಮಂಜೂರಾತಿ ನಿಯಮಗಳು, 1969 ನಿಯಮ 22ಎ(1)(7) ರಂತೆ ಪ್ರಚಲಿತ ಮಾರುಕಟ್ಟೆ ದರದ ಎರಡು ಪಟ್ಟು ಬೆಲೆ ಹಾಗೂ ನಿಯಮಾನುಸಾರ ಇತರೆ ಶುಲ್ಕವನ್ನು ವಿಧಿಸಿ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–1).

**PR. 565**

**SC. 100**

## ಸಹಕಾರ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಉದ್ಭವಿಸಿರುವ ತೀವ್ರ ಬರ ಪರಿಸ್ಥಿತಿ ಪರಿಣಾಮವಾಗಿ ರಾಜ್ಯದ ಸಹಕಾರ ಸಂಸ್ಥೆಗಳ ಮೂಲಕ ಸಾಲ ಪಡೆದು 2015–16ನೇ ಸಾಲಿನಲ್ಲಿ ವಸೂಲಿಗೆ ಬರುವ ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳ ಕಂತುಗಳನ್ನು ಒಂದು ವರ್ಷದ ಅವಧಿಗೆ ಮುಂದೂಡುವ ಬಗ್ಗೆ ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಅಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಆರ್‌ಡಿ/ಸಿಎಬಿ–1/ 2015–16, ದಿನಾಂಕ:15.09.2015.

**ಪ್ರಸ್ತಾವನೆ:**

ರಾಜ್ಯದಲ್ಲಿ ಪ್ರಸಕ್ತ ಸಾಲಿನಲ್ಲಿ, ಅಂದರೆ 2015–16 ನೇ ಸಾಲಿನ ಆಗಸ್ಟ್, 2015 ರವರೆಗೆ 136 ತಾಲ್ಲೂಕುಗಳನ್ನು ಬರಪೀಡಿತ ತಾಲ್ಲೂಕುಗಳೆಂದು ರಾಜ್ಯ ಸರ್ಕಾರವು ಘೋಷಿಸಿದೆ. ಬರಗಾಲ ಪರಿಸ್ಥಿತಿ ಹಿನ್ನೆಲೆಯಲ್ಲಿ ದಿನಾಂಕ:31.08.2015 ರಂದು ಮಾನ್ಯ ಸಹಕಾರ ಮತ್ತು ಸಕ್ಕರೆ ಸಚಿವರ ಅಧ್ಯಕ್ಷತೆಯಲ್ಲಿ ಮತ್ತು ದಿನಾಂಕ:07.09.2015 ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಈ ಬಗ್ಗೆ ಸಭೆಗಳು ನಡೆದಿದ್ದು, ಬರಗಾಲದ ಹಿನ್ನೆಲೆಯಲ್ಲಿ ರಾಜ್ಯದ ರೈತರು ಸಂಕಷ್ಟಕ್ಕೀಡಾಗಿದ್ದು, ಇವರ ನೆರವಿಗೆ ಬರಲು ಸರ್ಕಾರವು ತೀರ್ಮಾನಿಸಿರುತ್ತದೆ. ಅದರಂತೆ, ರಾಜ್ಯದಲ್ಲಿ ಸಹಕಾರ ಸಂಸ್ಥೆಗಳ ಮೂಲಕ ಅಂದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು ಮತ್ತು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ಮೂಲಕ ಕೃಷಿ ಮತ್ತು ಕೃಷಿ ಸಂಬಂಧಿತ ಮಧ್ಯಮಾವಧಿ/ದೀರ್ಘಾವಧಿ ಸಾಲಗಳನ್ನು ಪಡೆದಿದ್ದು, ದಿನಾಂಕ:01.04.2015 ರಿಂದ 31.03.2016 ಅವಧಿಯಲ್ಲಿ ಮರುಪಾವತಿಗೆ ಬರುವ ಮಧ್ಯಮಾವಧಿ/ದೀರ್ಘಾವಧಿ ಕೃಷಿ ಸಾಲದ ಕಂತುಗಳನ್ನು ಒಂದು ವರ್ಷದ ಅವಧಿಗೆ ಮುಂದೂಡಲು ಸರ್ಕಾರವು ತೀರ್ಮಾನಿಸಿದೆ.

ರಾಜ್ಯದಲ್ಲಿ ಪ್ರಸ್ತುತ ₹ 10.00 ಲಕ್ಷಗಳವರೆಗಿನ ಮಧ್ಯಮಾವಧಿ/ದೀರ್ಘಾವಧಿ ಸಾಲಗಳನ್ನು ಸಹಕಾರ ಸಂಸ್ಥೆಗಳ ಮೂಲಕ ವಿತರಿಸಲಾಗುತ್ತಿದೆ. ಈ ಸಾಲಗಳಲ್ಲಿ ಈ ಹಿಂದೆ ಶೇ.6, ಶೇ.4 ರ ಬಡ್ಡಿ ವಿಧಿಸಲಾಗುತ್ತಿದ್ದು, ಪ್ರಸ್ತುತ ಶೇ.3 ರ ಬಡ್ಡಿ ವಿಧಿಸಲಾಗುತ್ತಿದೆ. ಈ ಸಾಲಗಳಿಗೆ ರಾಜ್ಯ ಸರ್ಕಾರದಿಂದ ಬಡ್ಡಿ ಸಹಾಯಧನವನ್ನು ಒದಗಿಸಲಾಗುತ್ತಿದೆ.

ಮೇಲೆ ಓದಲಾದ (2) ರ ಪ್ರಸ್ತಾವನೆಯಲ್ಲಿ, ರಾಜ್ಯದಲ್ಲಿ ತೀವ್ರ ಬರಗಾಲ ಇರುವ ಹಿನ್ನೆಲೆಯಲ್ಲಿ 2015–16 ನೇ ಸಾಲಿನಲ್ಲಿ ವಸೂಲಿಗೆ ಬರುವ ಮಧ್ಯಮಾವಧಿ/ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲದ ಕಂತುಗಳನ್ನು ಒಂದು ವರ್ಷದ ಅವಧಿಗೆ ಮುಂದೂಡಲು ಮತ್ತು ಈ ರೀತಿ ಮುಂದೂಡುವುದರ ಪರಿಣಾಮವಾಗಿ ಸರ್ಕಾರ ಈ ಸಾಲಗಳಿಗೆ ನೀಡಬೇಕಾದ ಬಡ್ಡಿ ರಿಯಾಯಿತಿಯ ಜೊತೆಯಲ್ಲಿ ರೈತರು ಪಾವತಿಸಬೇಕಾದ ಅವರ ಪಾಲಿನ ಶೇ.6/4/3 ರ ಬಡ್ಡಿಯನ್ನು ಸರ್ಕಾರ ಭರಿಸಲು ಆದೇಶ ಹೊರಡಿಸಲು ಮತ್ತು ಇದಕ್ಕೆ ತಗಲುವ ಹೆಚ್ಚುವರಿ ವೆಚ್ಚವನ್ನು 2015–16 ನೇ ಸಾಲಿನಲ್ಲಿ ಕೃಷಿ ಸಾಲಗಳ ಬಡ್ಡಿ ಸಹಾಯಧನದ ಯೋಜನೆಯಡಿ ಒದಗಿಸಿರುವ ₹ 737.41 ಕೋಟಿಗಳಿಂದ ಭರಿಸಲು ಆದೇಶ ಹೊರಡಿಸಲು ತಮ್ಮ ಪ್ರಸ್ತಾವನೆಯಲ್ಲಿ ನಿಬಂಧಕರು ಸರ್ಕಾರವನ್ನು ಕೋರಿರುತ್ತಾರೆ.

ನಿಬಂಧಕರು ಪ್ರಸ್ತಾವನೆಯಲ್ಲಿ ಕೋರಿರುವಂತೆ ರಾಜ್ಯದ ಸಹಕಾರ ಸಂಸ್ಥೆಗಳ ಮೂಲಕ ಸಾಲಪಡೆದು 2015–16 ನೇ ಸಾಲಿನಲ್ಲಿ ವಸೂಲಾತಿಗೆ ಬರುವ ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲದ ಕಂತುಗಳನ್ನು ಒಂದು ವರ್ಷದ ಅವಧಿಗೆ ಷರತ್ತುಗಳಿಗೊಳಪಟ್ಟು ಮುಂದೂಡಲು ಸರ್ಕಾರವು ತೀರ್ಮಾನಿಸಿ ಅದರಂತೆ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಒ 358 ಸಿಎಲ್‌ಎಸ್ 2015, ದಿನಾಂಕ: 30.09.2015**

ರಾಜ್ಯದ ಸಹಕಾರ ಸಂಘಗಳು ಅಂದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು ಮತ್ತು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ಮೂಲಕ ಸಾಲಪಡೆದು 2015–16ನೇ ಸಾಲಿನಲ್ಲಿ ವಸೂಲಾತಿಗೆ ಬರುವ ಮಧ್ಯಮಾವಧಿ/ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲದ ಕಂತುಗಳನ್ನು ಒಂದು ವರ್ಷದ ಅವಧಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮುಂದೂಡಲು ಆದೇಶಿಸಿದೆ.

**ಷರತ್ತುಗಳು**

1. ಪ್ಯಾಕ್ಸ್/ಡಿಸಿಸಿಬಿ/ಪಿಎಲ್‌ಡಿ ಬ್ಯಾಂಕ್‌ಗಳ ಮೂಲಕ ದಿನಾಂಕ 01.04.2004 ರಿಂದ ದಿನಾಂಕ 31.03.2015ರವರೆಗೆ ಸಾಲ ಪಡೆದು 2015–16 ನೇ ಸಾಲಿನಲ್ಲಿ ಅಂದರೆ ದಿನಾಂಕ:01.04.2015 ರಿಂದ 31.03.2016 ರವರೆವಿಗೆ ಮರುಪಾವತಿಗೆ ತಗಾದೆಗೆ ಬರುವ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲದ ಕಂತುಗಳನ್ನು ಒಂದು ವರ್ಷದ ಅವಧಿಗೆ ಮುಂದೂಡಿದೆ.
2. ಈಗಾಗಲೇ ಈ ಸಾಲದ ಕಂತುಗಳನ್ನು ಮರು ಪಾವತಿಸಿರುವ ಸಾಲಗಾರರಿಗೆ ಈ ಯೋಜನೆ ಅನ್ವಯವಾಗುವುದಿಲ್ಲ.
3. 2015–16ನೇ ಸಾಲಿನಲ್ಲಿ ಒಂದು ವರ್ಷದ ಕಂತುಗಳನ್ನು ಮುಂದೂಡುವುದರಿಂದ ಒಂದು ವರ್ಷದ ಅವಧಿಗೆ ಚಾಲ್ತಿ ಕಂತುಗಳಿಗೆ ಸಂಬಂಧಿಸಿದ ಹೊರಬಾಕಿಗೆ ಮಾತ್ರ ಸರ್ಕಾರವು ಬಡ್ಡಿ ಸಹಾಯಧನದ ಜೊತೆಗೆ ರೈತರು ಸಾಲದ ಕಂತುಗಳ ಜೊತೆಯಲ್ಲಿ ಪಾವತಿಸಬೇಕಾದ ಶೇ.6/4/3 ರ ದರದ ಬಡ್ಡಿಯನ್ನು ಸರ್ಕಾರವು ಮನ್ನಾ ಮಾಡಿ ಈ ಮೊತ್ತವನ್ನು ರೈತರ ಪರವಾಗಿ ಸರ್ಕಾರವೇ ಭರಿಸುತ್ತದೆ.
4. ಈ ಯೋಜನೆಯಲ್ಲಿ ತಗಲುವ ವೆಚ್ಚವನ್ನು 2015–16ನೇ ಸಾಲಿಗೆ ಸಹಕಾರ ಇಲಾಖೆಗೆ ಒದಗಿಸಿರುವ ಆಯವ್ಯಯದ ಲೆಕ್ಕ ಶೀರ್ಷಿಕೆ 2425–00–107–2–41 ರಿಂದ ಭರಿಸತಕ್ಕದ್ದು.
5. ಸಾಲದ ಕಂತುಗಳನ್ನು ಪ್ರಸಕ್ತ ಸಾಲಿನಲ್ಲಿ ಮುಂದೂಡುವುದರಿಂದ ಸಾಲದ ಕಂತು ಅವಧಿ/ನಿಗಧಿತ ದಿನಾಂಕ ಮುಗಿದ ಕೂಡಲೇ ತ್ರೈಮಾಸಿಕವಾಗಿ ಆಯಾ ವರ್ಷಕ್ಕೆ ನಿಗಧಿಪಡಿಸಿದ ಬಡ್ಡಿ ಸಹಾಯಧನ ಮತ್ತು ಸಾಲದ ಕಂತುಗಳ ಜೊತೆ ರೈತರು ಪಾವತಿಸಬೇಕಾಗಿದ್ದ ಶೇ.6/4/3 ರ ಬಡ್ಡಿ ಮೊತ್ತದ ಕ್ಲೈಂ ಬಿಲ್ಲುಗಳನ್ನು ಸಲ್ಲಿಸತಕ್ಕದ್ದು.
6. ಮಧ್ಯಮಾವಧಿ ಸಾಲಗಳಿಗೆ ಸಂಬಂಧಿಸಿದಂತೆ ಪ್ಯಾಕ್ಸ್/ಡಿಸಿಸಿ ಬ್ಯಾಂಕುಗಳ ಬಿಲ್ಲುಗಳನ್ನು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ತಯಾರಿಸಿ ಸಹಕಾರ ಸಂಘಗಳ ಲೆಕ್ಕಪರಿಶೋಧನ ಉಪನಿರ್ದೇಶಕರು ಮತ್ತು ಸಹಕಾರ ಸಂಘಗಳ ಉಪನಿಬಂಧಕರು ಇವರುಗಳ ಜಂಟಿ ದೃಢೀಕರಣದೊಂದಿಗೆ ತ್ರೈಮಾಸಿಕ ಬಿಲ್ಲುಗಳನ್ನು ಬಿಡುಗಡೆಗೆ ವ್ಯವಸ್ಥಾಪಕ ನಿರ್ದೇಶಕರು, ಅಪೆಕ್ಸ್ ಬ್ಯಾಂಕ್ ಇವರ ಮೂಲಕ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

7. ದೀರ್ಘಾವಧಿ ಸಾಲಗಳಿಗೆ ಸಂಬಂಧಿಸಿದಂತೆ ಪಿಕಾರ್ಡ್ ಬ್ಯಾಂಕುಗಳ ಬಿಲ್ಲುಗಳನ್ನು ಜಿಲ್ಲಾ ವ್ಯವಸ್ಥಾಪಕರು ತಯಾರಿಸಿ ಸಹಕಾರ ಸಂಘಗಳ ಲೆಕ್ಕಪರಿಶೋಧನ ಉಪನಿರ್ದೇಶಕರು ಮತ್ತು ಸಹಕಾರ ಸಂಘಗಳ ಉಪನಿಬಂಧಕರು ಇವರುಗಳ ಜಂಟಿ ದೃಢೀಕರಣದೊಂದಿಗೆ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಇವರ ಮೂಲಕ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

8. ಸಹಕಾರ ಸಂಘಗಳ ನಿಬಂಧಕರು ಅರ್ಹ ಕ್ಲೈಂ ಗಳನ್ನು ಪರಿಶೀಲಿಸಿ, ನಿಗಧಿತವಾಗಿ ಹಣ ಬಿಡುಗಡೆಗೆ ಕ್ರಮವಿಡತಕ್ಕದ್ದು ಮತ್ತು ಕಾಲಕಾಲಕ್ಕೆ ಸರ್ಕಾರಕ್ಕೆ ಬಳಕೆ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.

9. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆ ಅನುಷ್ಠಾನಕ್ಕಾಗಿ ಅಗತ್ಯವಿರುವ ಪ್ರಪತ್ರಗಳನ್ನು ಒದಗಿಸಲು ಮತ್ತು ಕಾಲಕಾಲಕ್ಕೆ ಸಂಬಂಧಿಸಿದವರಿಗೆ ಅಗತ್ಯ ಸಲಹೆ/ಸೂಚನೆ/ನಿರ್ದೇಶನಗಳನ್ನು ನೀಡತಕ್ಕದ್ದು.

10. ಈ ಯೋಜನೆಯಡಿ ಕ್ಲೈಂ ಬಿಲ್ಲುಗಳನ್ನು ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸಲು 30 ಜೂನ್, 2016 ಅಂತಿಮ ದಿನಾಂಕವಾಗಿರತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/3861/ಪ್ರಕಾ/2015, ದಿನಾಂಕ:30.09.2015 ರಲ್ಲಿನ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವೆಂಕಟಸ್ವಾಮಿ,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 566**

**SC. 25**

## ತೋಟಗಾರಿಕಾ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ, ಗಾಜನೂರಿನಲ್ಲಿರುವ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯ ಕಟ್ಟಡ ಜಮೀನು ಸಹಿತವಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ವರ್ಗಾಯಿಸುವ ಕುರಿತು.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಪತ್ರ ಸಂಖ್ಯೆ: ರೇನಿ/ಸ್ಥಿರ/ಆ.ಶಾ/ಟಿ.ನ.ಪುರ/130/2003–04, ದಿನಾಂಕ: 10.09.2013/11-11-2013 ಮತ್ತು ರೇನಿ: ತಾಮಗ:ತಾ04:87:2007–08, ದಿನಾಂಕ: 13/20–07–2015.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 10–09–2013/11–11–2013 ಮತ್ತು 13/20–07–2015ರ ಪತ್ರಗಳಲ್ಲಿ ಶಿವಮೊಗ್ಗ ಜಿಲ್ಲೆ ಗಾಜನೂರಿನಲ್ಲಿರುವ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯಲ್ಲಿ ರೇಷ್ಮೆ ಮೊಟ್ಟೆ ತಯಾರಿಕೆಯನ್ನು ಸ್ಥಗಿತಗೊಳಿಸಿರುವುದರಿಂದ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರ (ಆಸ್ಪತ್ರೆ) ನಡೆಸಲು ಆರೋಗ್ಯ ಇಲಾಖೆಗೆ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯ ಕಟ್ಟಡವನ್ನು ವಿಧಿ ವಿಧಾನ ಅನುಸರಿಸಿ ವರ್ಗಾವಣೆ ಮಾಡಿಕೊಡಬೇಕಾಗಿ ತೀರ್ಥಹಳ್ಳಿ ವಿಧಾನಸಭಾ ಕ್ಷೇತ್ರದ ಶಾಸಕರಾದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರು ತಿಳಿಸಿರುವ ಮೇರೆಗೆ, ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ ಗಾಜನೂರಿನಲ್ಲಿ ಹಾಲಿ ಉತ್ಪಾದನೆ ಸ್ಥಗಿತಗೊಳಿಸಿರುವುದರಿಂದ ಅಲ್ಲಿ ಯಾವುದೇ ಇಲಾಖಾ ಚಟುವಟಿಕೆಗಳು ನಡೆಯದ ಪ್ರಯುಕ್ತ ಅದನ್ನು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ (ಆಸ್ಪತ್ರೆ) ಹಸ್ತಾಂತರಿಸಬಹುದೆಂದು ರೇಷ್ಮೆ ಜಂಟಿ ನಿರ್ದೇಶಕರು, ಬೆಂಗಳೂರು ಇವರು ನೀಡಿರುವ ಅಭಿಪ್ರಾಯದ ಮೇರೆಗೆ, ಗಾಜನೂರಿನಲ್ಲಿರುವ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ ಕಟ್ಟಡ 2.06 ಎಕರೆ ಜಮೀನು ಸಹಿತವಾಗಿ ಯಥಾಸ್ಥಿತಿಯಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ (ಆರೋಗ್ಯ ಇಲಾಖೆ) ಹಸ್ತಾಂತರಿಸುವುದರಿಂದ ಇಲಾಖೆಯ ಕಾರ್ಯಚಟುವಟಿಕೆಗಳಿಗೆ ಯಾವುದೇ ತೊಂದರೆಯಾಗುವುದಿಲ್ಲವೆಂದು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರಕ್ಕೆ ತಿಳಿಸುತ್ತಾ, ಹಸ್ತಾಂತರಿಸುವ ಬಗ್ಗೆ ಸೂಕ್ತ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಶಿವಮೊಗ್ಗ ಜಿಲ್ಲೆ ಗಾಜನೂರಿನಲ್ಲಿರುವ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯಲ್ಲಿ ರೇಷ್ಮೆ ಮೊಟ್ಟೆ ತಯಾರಿಕೆಯನ್ನು ಸ್ಥಗಿತಗೊಳಿಸಿರುವುದರಿಂದ ಅಲ್ಲಿ ಯಾವುದೇ ಇಲಾಖಾ ಚಟುವಟಿಕೆಗಳು ನಡೆಯದ ಪ್ರಯುಕ್ತ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ ಕಟ್ಟಡ 2–06 ಎಕರೆ/ಗುಂಟೆ ಜಮೀನು ಸಹಿತವಾಗಿ ಯಥಾಸ್ಥಿತಿಯಲ್ಲಿ ಜಿಲ್ಲಾಧಿಕಾರಿಗಳು ನಿಗಧಿಪಡಿಸುವ ದರ ಹಾಗೂ ಷರತ್ತುಗಳಿಗೊಳಪಟ್ಟು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ (ಆರೋಗ್ಯ ಇಲಾಖೆಗೆ) ಹಸ್ತಾಂತರಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂ: ತೋಇ 07 ರೇಯೋವಿ 2014, ಬೆಂಗಳೂರು, ದಿನಾಂಕ: 03.09.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಶಿವಮೊಗ್ಗ ಜಿಲ್ಲೆ ಗಾಜನೂರಿನಲ್ಲಿರುವ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯಲ್ಲಿ ರೇಷ್ಮೆ ಮೊಟ್ಟೆ ತಯಾರಿಕೆಯನ್ನು ಸ್ಥಗಿತಗೊಳಿಸಿರುವುದರಿಂದ ಅಲ್ಲಿ ಯಾವುದೇ ಇಲಾಖಾ ಚಟುವಟಿಕೆಗಳು ನಡೆಯದ ಪ್ರಯುಕ್ತ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ ಕಟ್ಟಡ 2–06 ಎಕರೆ/ಗುಂಟೆ ಜಮೀನು ಸಹಿತವಾಗಿ ಯಥಾಸ್ಥಿತಿಯಲ್ಲಿ ಜಿಲ್ಲಾಧಿಕಾರಿಗಳು ನಿಗದಿಪಡಿಸುವ ದರ ಹಾಗೂ ಷರತ್ತುಗಳಿಗೊಳಪಟ್ಟು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ (ಆರೋಗ್ಯ ಇಲಾಖೆಗೆ) ಹಸ್ತಾಂತರಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಕಂದಾಯ ಇಲಾಖೆಯ ಟಿಪ್ಪಣಿ ಸಂಖ್ಯೆ: ಆರ್ ಡಿ 44 ಎಲ್‌ಜಿಎಸ್ 2014, ದಿನಾಂಕ: 11–02–2015ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಲ್ ಚಿನ್ನಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ (ರೇಷ್ಮೆ)

**PR. 554**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ನ್ಯಾಯಮೂರ್ತಿ ಹೆಚ್. ಎಸ್. ಕೆಂಪಣ್ಣ ವಿಚಾರಣಾ ಆಯೋಗಕ್ಕೆ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ನಅಇ 619 ಬೆಂಭೂಸ್ವಾ 2014, ದಿನಾಂಕ: 16.08.2014.
2. ಸರ್ಕಾರದ ಅಧಿಸೂಚನೆ ಸಂ. ನಅಇ 619 ಬೆಂಭೂಸ್ವಾ 2014, ದಿನಾಂಕ: 03.12.2014.
3. ಸರ್ಕಾರದ ಅಧಿಸೂಚನೆ ಸಂ. ನಅಇ 619 ಬೆಂಭೂಸ್ವಾ 2014, ದಿನಾಂಕ: 27.02.2015.
4. ಆರ್ಥಿಕ ಇಲಾಖೆಯ ಅಧಿಸೂಚನೆ ಸಂ. ಎಫ್‌ಡಿ 156 ಬಿಆರ್‌ಎಸ್ 2014, ದಿನಾಂಕ: 02.03.2015.
5. ಸರ್ಕಾರದ ಆದೇಶ ಸಂ. ನಅಇ 712 ಬೆಂಭೂಸ್ವಾ 2014 ದಿನಾಂಕ: 20.04.2015 & 24.04.2015.
6. ಕಾರ್ಯದರ್ಶಿ, ನ್ಯಾಯಮೂರ್ತಿ ಹೆಚ್.ಎಸ್. ಕೆಂಪಣ್ಣ ಆಯೋಗದ ಪತ್ರ ಸಂ. ಜೆ.ಹೆಚ್.ಎಸ್.ಕೆ.ಸಿ–143/2015 ದಿನಾಂಕ: 23.06.2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ಅರ್ಕಾವತಿ ಬಡಾವಣೆಗೆ ಸಂಬಂಧಿಸಿದಂತೆ ಭೂಸ್ವಾಧೀನದಿಂದ ಕೈಬಿಟ್ಟಿರುವ /ಭೂಸ್ವಾಧೀನದಿಂದ ಹೊರತುಪಡಿಸಿರುವ ಜಮೀನುಗಳಿಗೆ ಸಂಬಂಧಿಸಿದಂತೆ ಆಗಿದೆ ಎನ್ನಲಾದ ಅಕ್ರಮಗಳ ಬಗ್ಗೆ ತನಿಖೆ ನಡೆಸಲು ನ್ಯಾಯಮೂರ್ತಿ ಹೆಚ್.ಎಸ್. ಕೆಂಪಣ್ಣ ವಿಚಾರಣಾ ಆಯೋಗವನ್ನು ರಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಆದೇಶದಲ್ಲಿ ಸದರಿ ಆಯೋಗದ ಸಿಬ್ಬಂದಿ ವೇತನ ಮತ್ತು ಪ್ರಾಸಂಗಿಕ ಖರ್ಚು–ವೆಚ್ಚಕ್ಕಾಗಿ ₹ 25.00 ಲಕ್ಷ ಹಣವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಅಧಿಸೂಚನೆಯಲ್ಲಿ ಸದರಿ ಆಯೋಗದ ಅವಧಿಯನ್ನು ದಿನಾಂಕ: 01.03.2015 ರಿಂದ 6 ತಿಂಗಳ ಅವಧಿಯವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಆದೇಶದಲ್ಲಿ ಸದರಿ ಆಯೋಗದ ಸಿಬ್ಬಂದಿ ವೇತನ ಮತ್ತು ಪ್ರಾಸಂಗಿಕ ಖರ್ಚು–ವೆಚ್ಚಕ್ಕಾಗಿ ₹ 12.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಆದೇಶದಲ್ಲಿ ಸದರಿ ಆಯೋಗದ ಸಿಬ್ಬಂದಿ ವೇತನ ಮತತು ಪ್ರಾಸಂಗಿಕ ಖರ್ಚು–ವೆಚ್ಚಕ್ಕಾಗಿ ₹ 30.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (6) ರ ಪತ್ರದಲ್ಲಿ ಕಾರ್ಯದರ್ಶಿ, ನ್ಯಾಯಮೂರ್ತಿ ಹೆಚ್.ಎಸ್. ಕೆಂಪಣ್ಣ ವಿಚಾರಣಾ ಆಯೋಗ ಇವರು ದಿನಾಂಕ: 31.08.2015ರವರೆಗೆ ಆಯೋಗದ ಸಿಬ್ಬಂದಿ ವೇತನ ಮತ್ತು ಪ್ರಾಸಂಗಿಕ ಖರ್ಚು–ವೆಚ್ಚಕ್ಕಾಗಿ ₹ 20.00 ಲಕ್ಷಗಳ ಅನುದಾನವನನು ಬಿಡುಗಡೆ ಮಾಡುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 712 ಬೆಂಭೂಸ್ವಾ 2014, ದಿನಾಂಕ: 11.08.2015.**

ನ್ಯಾಯಮೂರ್ತಿ ಶ್ರೀ ಹೆಚ್. ಎಸ್. ಕೆಂಪಣ್ಣ ವಿಚಾರಣಾ ಆಯೋಗಕ್ಕೆ ಸಿಬ್ಬಂದಿಯ ವೇತನ, ಪ್ರಾಸಂಗಿಕ ಖರ್ಚು–ವೆಚ್ಚ ಹಾಗೂ ಲೇಖನ ಸಾಮಗ್ರಿಗಳು ಮತ್ತಿತರೆ ಸಾಮಗ್ರಿಗಳನ್ನು ಖರೀದಿಸಲು ಅನುಕೂಲವಾಗುವಂತೆ 2015–16ನೇ ಸಾಲಿನ ಆರ್ಥಿಕ ವರ್ಷದಲ್ಲಿ ₹ 20,00,000/– (ಇಪ್ಪತ್ತು ಲಕ್ಷ ಮಾತ್ರ) ಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ ***"2070–00–105–0–02–059*** (ಯೋಜನೇತರ) ಇತರೆ ವಿಚಾರಣಾ ಆಯೋಗ**"** ಅಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 31 ಹೆಸಆ 2015ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ನರಸಿಂಹಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ
(ಬಿ.ಡಿ.ಎ) ಮತ್ತು ಬೆಂಗಳೂರು

**PR. 555**
**SC.50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59